# ಮಾನಸಿ

ತಿಂಗಳ ಪತ್ರಿಕೆ ಜೂನ್ 94'

★ ಸ್ತ್ರೀವಾದಿ ವಿಮರ್ಶೆಯ ಸುತ್ತ ಒಂದಷ್ಟು ಟಿಪ್ಪಣಿಗಳು

★ ಮಿರಿಯಂ ಚ್ಯಾಲಿ

★ ನಾನು !

★ ಸ್ಮಿತಾ ಜಿ.ಯವರ 'ನೆರಳು' ಕವನ ಸಂಕಲನ – ಒಂದು ಅನಿಸಿಕೆ

★ ಪಿತೃ ಪ್ರಧಾನತೆಯ ಉಗಮ : ಕೆಲವು ವಿವರಣೆಗಳು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೯ ಸಂಚಿಕೆ : ೫

ಜೂನ್ - ೧೯೯೪

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮೀಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3. 00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ನೆಲ್ಸನ್ ಮಂಡೇಲಾ ಅಧಿಕಾರ ವಹಿಸಿಕೊಂಡಿರುವುದು ಇಂದು ಪ್ರಪಂಚದ ಕಣ್ಣಲ್ಲಿ ಬರಿಯ ದಕ್ಷಿಣ ಆಫ್ರಿಕಾದ ಕರಿಯರ ಸ್ವಾತಂತ್ರ್ಯ ಮಾತ್ರವಲ್ಲ, ಶೋಷಣೆಗೆ ಒಳಗಾದವರ ಸ್ವಾತಂತ್ರ್ಯ ಎಂಬರ್ಥದಲ್ಲಿ, ಅಧಿಕಾರ ವರ್ಗದವರ ವಿರುದ್ಧದ ಸಮರದ ಸ್ವಾತಂತ್ರ್ಯ ಎಂಬರ್ಥದಲ್ಲಿ ಸ್ವಾಗತಿಸಲ್ಪಡುತ್ತಿದೆ. ನಮ್ಮೆಲ್ಲರ ಬದುಕಿನ ಬೇರುಗಳ ಉಳಿಸಿಕೊಳ್ಳುವ ನಂದಾದೀಪವಾಗಿ ಇಂದು ಕರಿಯರ ಸ್ವಾತಂತ್ರ್ಯವನ್ನು ನಾವೆಲ್ಲರೂ ಸಂಭ್ರಮ, ಸಂತೋಷದಿಂದ ಆಚರಿಸಿದ್ದೇವೆ.

ರಾಷ್ಟ್ರೀಯವಾದದ ಪ್ರಶ್ನೆ ಹೇಗೆ ಮಹಿಳಾ ಪ್ರಶ್ನೆಯನ್ನು ಅರ್ಥ ಮಾಡಿಕೊಂಡಿದೆ, ಹೇಗೆ ತನ್ನೊಡಲೊಳಗೆ ಹುದುಗಿಸಿಕೊಂಡು ಮಹಿಳಾ ಬದುಕಿನಲ್ಲಿ ದ್ವಂದ್ವಗಳನ್ನು ಹುಟ್ಟುಹಾಕಿದೆ ಎಂಬುದನ್ನು ಚರಿತ್ರೆಯ ಪಾಠಗಳಲ್ಲಿ ನಾವು ಕಲಿಯುತ್ತಿದ್ದೇವೆ. ಆಧ್ಯಾತ್ಮಿಕತೆಯ ಹೆಸರಿನಲ್ಲಿ, ಪುರುಷಾಧಿಕಾರದ ಮಹತ್ವದೊಂದಿಗೆ ಗೃಹ ಪ್ರಪಂಚದ ದ್ವಂದ್ವ ಹುಟ್ಟುಹಾಕಿ ಗೃಹದೆಡೆಗೇ, ಮಕ್ಕಳ ಲಾಲನೆ-ಪಾಲನೆಯ ಕಡೆಗೇ ಸ್ತ್ರೀಯರನ್ನು ದೂಡಿದೆ ಎಂಬುದನ್ನು ಆಂಧ್ರದ ನಕ್ಸಲೈಟ್ ಚಳವಳಿ, ಭಾರತದ ಸ್ವಾತಂತ್ರ್ಯ ಚಳುವಳಿ, ಪ್ರಪಂಚದ ಇತರ ಕಡೆಯ ಸ್ವಾತಂತ್ರ್ಯ ಚಳುವಳಿಗಳೂ ನಮಗೆ ಸಾಕ್ಷ್ಯಾಧಾರಗಳನ್ನು ಒದಗಿಸಿವೆ.

ದಕ್ಷಿಣ ಆಫ್ರಿಕಾದ ವಿನ್ನಿ ಈಗಿನ ಅಧ್ಯಕ್ಷರ ಮಾಜಿ ಪತ್ನಿ. ಗಂಡ ಸೆರೆಮನೆ ವಾಸದಲ್ಲಿದ್ದಾಗ ಕರಿಯರ ಕ್ರಾಂತಿಯ ಮುಂಚೂಣಿಯಲ್ಲಿದ್ದವರು. ಏನೆಲ್ಲ ಗೊಂದಲ/ವೈರುಧ್ಯಗಳ ನಡುವೆಯೂ ಆಕೆ ಹಾಗೂ ಆಕೆಯ ಮಗಳು ಮಂಡೇಲಾರ ಗೈರು ಹಾಜರಿಯಲ್ಲಿ ಕರಿಯರ ಧ್ವನಿಯನ್ನು ಉಳಿಸಿ, ಬೆಳೆಸಲು ಸ್ಫೂರ್ತಿಯಾಗಿದ್ದಾರೆ, ಶ್ರಮಿಸಿದ್ದಾರೆ, ನೊಂದಿದ್ದಾರೆ, ಅಪಮಾನ ಅನುಭವಿಸಿದ್ದಾರೆ. ಹೀಗೆಯೇ ನೊಂದು-ಬೆಂದ ಹಲವಾರು ಲೇಖಕಿಯರಿದ್ದಾರೆ, ಕ್ರಾಂತಿಕಾರಿಗಳಾಗಿ ದುಡಿದ ಹೆಣ್ಣು ಮಕ್ಕಳಿದ್ದಾರೆ, ಲಿಲಿಯನ್ ನೊಗೋಯ್‌ಯಂತಹ ಪತ್ನಿಯಾಗಿದ್ದೂ ಕ್ರಾಂತಿಕಾರಿಗಳಾದವರೂ ಇದ್ದಾರೆ. ಈಗ ಸ್ವಾತಂತ್ರ್ಯ ಹೊಂದಿರುವ ದಕ್ಷಿಣ ಆಫ್ರಿಕಾದ ರಾಷ್ಟ್ರೀಯವಾದ ಇವರೆಲ್ಲರ ಭಾಗವಹಿಸುವಿಕೆಯನ್ನು ಹೇಗೆ ದಾಖಲಿಸುತ್ತದೆ ಎಂಬುದನ್ನು ಕಾದು ನೋಡಬೇಕು. ದಕ್ಷಿಣ ಆಫ್ರಿಕಾದ ಈಗಿನ ರಾಷ್ಟ್ರೀಯವಾದ ಮಹಿಳಾ ಪ್ರಶ್ನೆಗಳನ್ನು ಹೇಗೆ ಅರ್ಥೈಸುತ್ತದೆ, ಶಾಸನಾಧಿಕಾರದಲ್ಲಿ ಹೇಗೆ ಮಂಡಿಸುತ್ತದೆ ಎಂಬುದನ್ನು ಇಡಿಯ ಪ್ರಪಂಚದ ಮಹಿಳಾ ಚಳುವಳಿ ಕುತೂಹಲದಿಂದ ನಿರೀಕ್ಷಿಸುತ್ತಿದೆ.

# ಸ್ತ್ರೀವಾದಿ ವಿಮರ್ಶೆಯ ಸುತ್ತ ಒಂದಷ್ಟು ಟಿಪ್ಪಣಿಗಳು

○ ಎಚ್. ಎಸ್. ಚಂಪಾವತಿ

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ-ವಾದಿ ವಿಮರ್ಶೆ/ಮೀಮಾಂಸೆಯ ಬಗ್ಗೆ ಪ್ರಕಟವಾಗಿರುವ ಹಲವಾರು ಲೇಖನಗಳಲ್ಲಿ-ಚರ್ಚಿತವಾಗಿರುವ ಹಲವಾರು ಮುಖ್ಯಾಂಶಗಳ ಮೇಲೆ ಬೆಳಕು ಚೆಲ್ಲುವುದು, ಚರ್ಚೆ ಮುಂದುವರಿಸುವುದಷ್ಟೇ ಈ ಟಿಪ್ಪಣಿಗಳ ಉದ್ದೇಶ. ಇಲ್ಲಿರುವ ಹಲವು ಲೇಖನಗಳಲ್ಲಿ ಈಗಾಗಲೇ ಪ್ರಕಟವಾಗಿರುವ ಸ್ತ್ರೀಯರ ಕತೆಗಳು, ಕಾವ್ಯ, ಕಾದಂಬರಿ, ಪೂರ್ವ ಲೇಖಕಿಯರ ಬದುಕು-ಬರಹಗಳ ಶೋಧನೆಯಲ್ಲಿ, ಲೇಖಕ/ಲೇಖಕಿಯರ ಕೃತಿಗಳ ವಿಮರ್ಶೆಯಲ್ಲಿ ಸ್ತ್ರೀವಾದಿ ಮೀಮಾಂಸೆಗೆ ಒಂದು ತಾತ್ವಿಕ ಚೌಕಟ್ಟು ಒದಗಿಸುವ ಪ್ರಯತ್ನವನ್ನು ನಾವು ಕಾಣುತ್ತೇವೆ. ವಿಜಯಾ ದಬ್ಬೆಯವರ 'ಮಹಿಳೆ ಸಾಹಿತ್ಯ ಸಮಾಜ' 1989 ; ಕರ್ನಾಟಕ ಸಾಹಿತ್ಯ ಆಕಾಡೆಮಿ ಪ್ರಕಟಿಸಿದ 'ಕನ್ನಡ ಸಾಹಿತ್ಯ ಸಂದರ್ಭ' 1990 ; ವೀಣಾ ಶಾಂತೇಶ್ವರ್ ಇವರ ಸಂಪಾದಕತ್ವದಲ್ಲಿ ಹೊರ ಬಂದಿರುವ 'ಮಹಿಳಾ ಅಧ್ಯಯನ'ದ ಹಲವಾರು ಲೇಖನಗಳು ('ಸಾಹಿತ್ಯದಲ್ಲಿ ಸ್ತ್ರೀವಾದ' ಬಿ. ಎನ್. ಸುಮಿತ್ರಾಬಾಯಿ ; 'ಕನ್ನಡದ ಸಾಹಿತ್ಯಕ ಚಳುವಳಿಗಳು ಮತ್ತು ಮಹಿಳೆ'-ವಿಜಯಾದಬ್ಬೆ, 'ಕನ್ನಡ ಸಾಹಿತ್ಯದಲ್ಲಿ ಚಿತ್ರಿತ ಮಹಿಳೆ'-ಎಚ್. ಎಸ್. ರಾಘವೇಂದ್ರ ರಾವ್)- ಈ ಹಲವಾರು ಪುಸ್ತಕ ಹಾಗೂ ಲೇಖನಗಳಲ್ಲಿ ಕೃತಿಗಳ ವಿಮರ್ಶೆಯಲ್ಲಿ ಸ್ತ್ರೀವಾದಿ ಮೀಮಾಂಸೆಗೆ ತಾತ್ವಿಕ ಚೌಕಟ್ಟು ಒದಗಿಸುವ ಪ್ರಯತ್ನ ನಾವು ಕಾಣುತ್ತೇವೆ. ಎನ್. ಮನುಚಕ್ರವರ್ತಿ ಸಂಪಾದಿಸಿದ 'ಭಾರತೀಯ ಸ್ತ್ರೀವಾದ'-1993;ರಲ್ಲಿಯೂ ಸಹ 'ಸಾಹಿತ್ಯದಲ್ಲಿ ಸ್ತ್ರೀವಾದದ ಆಯಾಮಗಳು : ಭಾರತದ ಮೂರು ಮುಖ್ಯ ಕತೆಗಳ ಪ್ರಾಯೋಗಿಕ ವಿಮರ್ಶೆಯಲ್ಲಿ ಮನುಚಕ್ರವರ್ತಿಯವರು ಸ್ತ್ರೀವಾದಿ ವಿಮರ್ಶೆಯ ಕೆಲವು ಸ್ತರಗಳನ್ನು ಮಂಡಿಸಿದ್ದಾರೆ, ಡಾ. ಡಿ. ಆರ್ ನಾಗರಾಜ್‌ರವರ ಲೇಖನ 'ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ: ಸಮಸ್ಯೆಗಳು,-ಸಾಧ್ಯತೆಗಳು' ಸ್ತ್ರೀವಾದಿ ವಿಮರ್ಶೆಯ ಬಗ್ಗೆ ತಾತ್ವಿಕ ದೃಷ್ಟಿಕೋನ ಕಟ್ಟಿಕೊಡುವ ಪ್ರಯತ್ನ ಮಾಡುತ್ತದೆ. ಮೇಲೆ ಹೆಸರಿಸಿದ ಲೇಖನಗಳು ಚರ್ಚಿಸಿದ ಹಿನ್ನೆಲೆಯಲ್ಲಿ ಹಾಗೂ ವಿಶೇಷವಾಗಿ ಡಿ.ಆರ್.ನಾಗರಾಜ್‌ರವರು ಪ್ರಸ್ತಾಪಿಸಿದ ವಿಚಾರಗಳ ಹಿನ್ನೆಲೆಯಲ್ಲಿ ಈ ಟಿಪ್ಪಣಿಗಳನ್ನು ಬರೆಯುತ್ತಿದ್ದೇನೆ. ಮುಖ್ಯಾಂಶಗಳ ಬಗ್ಗೆ ಕೆಲವು ಅಭಿಪ್ರಾಯ ಸೂಚಿಸುವುದಷ್ಟೇ ಈ ಟಿಪ್ಪಣಿಯ ಉದ್ದೇಶ.

**ಅಧಿಕಾರ ಸಂಬಂಧಗಳು** (Power ralations)

ಅಧಿಕಾರ ಹಾಗೂ ಅಧಿಕಾರ ಸಂಬಂಧಗಳ ಬಗ್ಗೆ ಮಹಿಳಾ ಚಳುವಳಿಯ ಈ ಇಪ್ಪತ್ತು ವರ್ಷಗಳಲ್ಲಿ ಚರ್ಚೆಯಾದಷ್ಟು ಮತ್ತಾವ ವಿಚಾರಗಳ ಬಗ್ಗೆಯೂ ಚರ್ಚೆಯಾದುದಿಲ್ಲ. 1975ರ ಹೊತ್ತಿಗೆ ಸಂಪೂರ್ಣ ಸ್ವಾಯತ್ತ ಸಂಸ್ಥೆಗಳಾಗಿ ರೂಪುಗೊಂಡ ಮಹಿಳಾ ಸಂಘಟನೆಯಲ್ಲಿಯಂತೂ 'ಅಧಿಕಾರ'ದ ಕಲ್ಪನೆ ಸಂಸ್ಥೆಗಳ ರಚನಾತ್ಮಕ ವಿಚಾರದಿಂದ ಹಿಡಿದು ಸಂಬಂಧಗಳ ವಿವರಗಳವರೆಗೆ ಕೂಡಾ ಹರಿದು ಬಂದುದರಿಂದ 'ಅಧಿಕಾರ'ದ ಸಂಬಂಧ ವಿಭಿನ್ನ ಬಗೆಯಲ್ಲಿ ಚರ್ಚಿತಗೊಂಡಿರುವುದನ್ನು ನಾವು ಕಾಣುತ್ತೇವೆ. ಸ್ವಾಯತ್ತ ಸಂಘಟನೆಗಳಾಗಿ ಮಹಿಳಾ ಸಂಘಟನೆಗಳು ರೂಪುಗೊಳ್ಳುವ ಹಂತದಲ್ಲಿ 'ಅಧಿಕಾರ'ದ ಕಲ್ಪನೆ ಪುರುಷಾಧಿಕಾರದ ನೆಲೆಯಲ್ಲಿ ಚರ್ಚಿತವಾಗಿದ್ದರೂ ಸಹ, ಒಮ್ಮೆ ಅಸ್ತಿತ್ವಕ್ಕೆ ಬಂದ ಸಂಘಟನೆಗಳಲ್ಲಿ ಈ 'ಅಧಿಕಾರ' ಎಂಬ ಕಲ್ಪನೆಯ demystification ಹೇಗೆ ಮಾಡಬೇಕು ಎಂಬುದು ಭಾರತದಲ್ಲಿ ಕಳಕಳಿಯಿರುವ ಮಹಿಳಾ ಗುಂಪುಗಳ ಮುಖ್ಯ ಪ್ರಶ್ನೆಯಾಗಿ, ಸವಾಲಾಗಿ ಎದುರಿಗೆ ಕಂಡುದಿದೆ. ಮಹಿಳೆಯರನ್ನಷ್ಟೇ ಒಳಗೊಂಡ ಸಂಘಟನೆಗಳು, ಮಹಿಳೆಯರ ಒಗ್ಗೂಡಿದ ನಾಯಕತ್ವ (collective leadership), ನಿರ್ಧಾರ, ಕ್ರಿಯಾಶೀಲತೆಗಳನ್ನೇ ಬೆನ್ನೆಲುಬಾಗಿಸಿಕೊಂಡ ಸಂಘಟನೆಗಳು ಪುರುಷಾಧಿಕಾರದ ನೆಲೆ ಬಿಟ್ಟು, ಶ್ರೇಣೀಕೃತ ವ್ಯವಸ್ಥೆಯನ್ನೇ ಮೂಲಭೂತವಾಗಿ ವಿರೋಧಿಸಿಕೊಂಡು 'ಅಧಿಕಾರ' ಎಂಬುದರ ಪ್ರಶ್ನೆಯನ್ನು ಕೈಗೆತ್ತಿಕೊಂಡುದನ್ನು ನಾವು ಕಾಣುತ್ತೇವೆ. ಹಲವಾರು ಸಮಸ್ಯೆಗಳಲ್ಲಿ ನೊಂದು ಬರುವ ಬದುಕಿನ

ಹಲವಾರು ಆಯಾಮಗಳನ್ನು ಪ್ರತಿನಿಧಿಸುತ್ತಾ ಬರುವ ಮಹಿಳೆಯರ ಬದುಕು ಅರಳುವುದು ಹೇಗೆ ? ಸಂಘಟನೆ ಯೊಳಗಿನ ಯಾವ ರಚನೆ, ಸಂಬಂಧಗಳು ಮಹಿಳೆಯರ ಬದುಕಿನ ಆಯಾಮ,ವೈವಿಧ್ಯತೆಗಳ ಅರಳುವಿಕೆಗೆಸಹಾಯ ವೆಸಗುತ್ತವೆ ಎಂಬುದು ಬಹಳಷ್ಟು ಚರ್ಚಿತವಾದ ವಿಚಾರ. ಇಲ್ಲಿಯೂ ಮಹಿಳೆಯರ ಅಧಿಕಾರದ ಪ್ರಶ್ನೆ ಇರುತ್ತದೆ. ಅದು ಪುರುಷಾಧಿಕಾರದ ನೆಲೆಯ ಅಧಿಕಾರ ವಲ್ಲ. ಮಹಿಳೆಯರೊಳಗಿನ ಅಂತ ವಿಸ್ತಾರದ ಅಧಿಕಾರದ ಕಲ್ಪನೆ. ಮನುಷ್ಯಳಾಗಿ ಬಾಳಲು, ತನ್ನ ವ್ಯಕ್ತಿತ್ವ ಅರಳಿಸಿ ಕೊಳ್ಳಲು, ತನ್ನ ದೇಹದ ಮೇಲಿನ, ಮನಸ್ಸಿನ ಮೇಲಿನ ಹಕ್ಕನ್ನು ತಾನೇ ಉಳಿಸಿಕೊಳ್ಳುವುದಕ್ಕಾಗಿ, ತನ್ನೊಳಗಿನ ಅಂತರಂಗದ ಅಭಿಲಾಷೆಗಳಿಗೆ, ಚೇತನಗಳಿಗೆ ತನ್ನದೇ, ಅಭಿವ್ಯಕ್ತಿ ನೀಡುವ - ತನ್ನೊಳಗಿನ ಅಧಿಕಾರಕ್ಕೆ, ಅಂತ ಸತ್ವಕ್ಕೆ ತಾನೇ ಒಡತಿಯಾಗುವ ಅಧಿಕಾರದ ಕಲ್ಪನೆಗಳಿವು. ಮಹಿಳೆಯರಲ್ಲಿನ ಒಬ್ಬರ ಪ್ರತಿಭೆಯ ಶಕ್ತಿಯೇ ಇನ್ನೊಬ್ಬರ ಮೇಲೆ ಹಕ್ಕು ಚಲಾಯಿಸುವ, ಅಧಿಕಾರ ಸ್ಥಾಪಿಸಿ ಬಿಡುವ ವಿಚಾರವಾಗಿ ಬಿಡಬಹುದು. ಇಂತಹ ಅಪಾಯಗಳಿಂದ ಪುರುಷಾಧಿಕಾರದ ನೆಲೆಗಳಿಂದ ತಪ್ಪಿಸುವ ಪ್ರಯತ್ನಗಳಾಗಿಯೇ ಮೂಡಿ ಬಂದು ತಾತ್ವಿಕ ಚೌಕಟ್ಟು ಪಡೆದುಕೊಂಡವುಗಳು—ಅವಕಾಶ, ಸ್ಪೇಸ್, ಸ್ಪರ್ಧಾತ್ಮಕ ವಾಗಿಲ್ಲದಿರುವುದು, ಶ್ರೇಣೀಕೃತ ವ್ಯವಸ್ಥೆ ಸಂಘಟನೆ ಗಳೊಳಗೆ ಹೊಂದದಿರುವುದು. ಇಲ್ಲಿ ಮುಖ್ಯವಾಗುವು ದೆಂದರೆ ಒಬ್ಬೊಬ್ಬರ ಅಂತಸತ್ವದ ಶಕ್ತಿಗಳೂ ಪರಸ್ಪರ ಸಹಾಯಕ್ಕೆ ಬರುವಂತಹದು. ಹೀಗೆ ಹಲವಾರು ಅಂತ ಸತ್ವ ಶಕ್ತಿಗಳ ಪರಸ್ಪರ ಅವಲಂಬನೆಯ ಹಂತದಲ್ಲಿಯೇ 'ಕಲೆಕ್ಟೀವ್' ಎನ್ನುವುದಕ್ಕೆ ಒಂದು ಮುಖ್ಯವಾದ ಅರ್ಥ ಬರುವುದು. 'Demystification of power' ಎನ್ನುವ ಮುಖ್ಯ ಅಂಶದ ಹಿನ್ನೆಲೆಯಲ್ಲಿಯೇ ಮೇಲ್ಕಂಡ ವಿಚಾರಗಳೆಲ್ಲ ಮಹಿಳಾ ಸಂಘಟನೆಗಳಿಗೆ, ಮಹಿಳಾ ಚಳುವಳಿಗೆ ಒಂದು ತಾತ್ವಿಕ ಚೌಕಟ್ಟನ್ನು ಒದಗಿಸಿ ಕೊಡುತ್ತಲೇ ಈಗಾಗಲೇ ರೂಢಿಯಲ್ಲಿರುವ 'ಅಧಿಕಾರ'ದ ಪ್ರಶ್ನೆಗೆ ಸವಾಲಾಗಿ ನಿಲ್ಲುತ್ತವೆ.

ಈ ಸ್ವಾಯತ್ತ ಶಕ್ತಿಗಳೂ ಪ್ರತಿರೋಧಗಳಿಗೆ ಗಮನ ಕೊಡುತ್ತಲೇ ಬೆಳೆಯಬೇಕಾಗುತ್ತದೆ. ಯಾಕೆಂದರೆ ಅಸ್ತಿತ್ವದಲ್ಲಿರುವ ಸಾಂಸ್ಕೃತಿಕ, ಸಾಮಾಜಿಕ ರಚನೆಯಲ್ಲಿ ಪ್ರಭುತ್ವಾಧಿಕಾರದ ಆಯಸ್ಕಾಂತದ ಹೊರಗಡೆ ಇರುವು ದನ್ನು ಮಾತಾನಾಡುವುದು ಕಷ್ಟ. ಕುಟುಂಬ-ಸಮಾಜ, ವ್ಯಕ್ತಿ-ಕುಟುಂಬ ಹೀಗೆ ಸ್ಪಷ್ಟವಾಗಿರುವ ಇಬ್ಬಗೆಯ ದ್ವಂದ್ವಗಳಲ್ಲಿ ಪಡಿಯಚ್ಚುಗಳಾಗಿ ಬದುಕುವ ಸಾಮಾಜಿಕ ಸಂದರ್ಭದಲ್ಲಿ ಪ್ರತಿರೋಧವಿಲ್ಲದೇ ಅರಳುವ ಅಂತ ಸತ್ವದ ಶಕ್ತಿಯ ಬಗ್ಗೆ, ಪ್ರಭುತ್ವಾಧಿಕಾರದ ಆಯಸ್ಕಾಂತದ ಹೊರಗಿರುವ ಬಗ್ಗೆಯೇ ಚರ್ಚಿಸುವುದು ಕಷ್ಟಸಾಧ್ಯ ವಾಗುತ್ತದೆ.

ಮಹಿಳಾ ಚಳುವಳಿಯಲ್ಲಿ ಈ ಇಪ್ಪತ್ತು ವರ್ಷಗಳಲ್ಲಿ ನಡೆಯುತ್ತಿರುವ 'ಅಧಿಕಾರ'ದ ಕಲ್ಪನೆಯ ಬಗ್ಗೆ ಪ್ರಸ್ತುತ ಸ್ತ್ರೀವಾದಿ ವಿಮರ್ಶೆಯಲ್ಲಿ ಇಷ್ಟು ಧೀರ್ಘವಾಗಿ ನಾನು ಚರ್ಚಿಸುತ್ತಿರುವುದಕ್ಕೆ ಕಾರಣಗಳಿವೆ. ಡಿ. ಆರ್. ನಾಗರಾಜ್' ತಮ್ಮ ಲೇಖನ 'ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ : ಸಮಸ್ಯೆಗಳು - ಸಾಧ್ಯತೆ ಗಳು'—ದ ಎರಡನೆಯ ಪ್ಯಾರಾಗ್ರಫ್‌ನಲ್ಲಿ ಈ ಮಾತು ಹೇಳುತ್ತಾರೆ. 'ಶೋಷಣೆ' ಎನ್ನುವ ತಾತ್ವಿಕ ಆ ಕೃತಿ ಯನ್ನು ಕೇಂದ್ರವಾಗಿಟ್ಟುಕೊಂಡು ಹೊರಡುವ ಯಾವುದೇ ಮೀಮಾಂಸೆ ಮೊದಲು 'ಅಧಿಕಾರ' ಎನ್ನುವ ತಾತ್ವಿಕ ಸತ್ಯದ ಸ್ವರೂಪವನ್ನು ನಿರ್ವಚಿಸಿಕೊಳ್ಳಬೇಕಾ ಗಿದೆ.' ಹೀಗೆ ಸಂಸ್ಕೃತಿ ಮೀಮಾಂಸೆಯ ನೆಲೆಯಲ್ಲಿ 'ಅಧಿಕಾರ'ದ ಕಲ್ಪನೆಯ ಬಗ್ಗೆ ಚರ್ಚೆ ನಡೆಸುತ್ತಾ ಇವರು ಸೋತವರ ಅಂತಃ ವಿಸ್ತಾರದ ಕಲ್ಪನೆ ಸೀಮಿತ ವಾಗಿರುವ ಬಗ್ಗೆ, ಸೋತವರ ಸ್ವಾಯತ್ತತೆಯ ಬಹು ಮುಖೀ ಆಯಾಮಗಳು ಕುಗ್ಗುವ ಬಗ್ಗೆ, ಸ್ತ್ರೀಯರ ಬದುಕನ್ನು ಪುರುಷಾಧಿಕಾರದ ನೆಲೆಯಲ್ಲಿ ನೋಡುತ್ತಾ ಹೋಗುವ ಅಪಾಯದ ಬಗ್ಗೆ ತಮ್ಮ ಕಳಕಳಿ ಸೂಚಿಸು ತ್ತಾರೆ. ಪ್ರಭುತ್ವಾಧಿಕಾರದ ಆಯಸ್ಕಾಂತದ ಹೊರಗಡೆ ಇದ್ದು ಸ್ವಂತ ಶಕ್ತಿವಲಯವನ್ನು ಹೆಚ್ಚು ಸಮಗ್ರ ಗೊಳಿಸಿರುವ ವಿಧಾನಗಳ ಬಗ್ಗೆ ಗಮನವಿರುವ ವಿಷ್ನು ಶಕ್ತಿಯ ದೂರದ ಜಗತ್ತಿನ ವಿವರಣೆಯ ಬಗ್ಗೆ ಮಾತ ನಾಡುತ್ತಾ ಸ್ತ್ರೀವಾದಿ ಚಿಂತನೆಗಳು ಅತ್ಯಗತ್ಯವಾಗಿ ಶೋಧಿಸಬೇಕಾದ ವಲಯ ಇದು ಎಂದೂ ಕೂಡಾ ಸಲಹಿಸುತ್ತಾರೆ.

ಅವರು ಹೇಳಿರುವ ಈ 'ಅಧಿಕಾರ'ದ ಬಗೆಗಿನ ವಿವರಣೆ, ಸಲಹೆಗಳಿಗಾಗಿಯೇ ನಾನು ಮಹಿಳಾ ಚಳವಳಿ ಯಲ್ಲಿನ 'ಅಧಿಕಾರ'ದ ಕಲ್ಪನೆಯ ಬಗ್ಗೆ ಅಷ್ಟು ದೀರ್ಘ ವಾಗಿ ಬರೆದದ್ದು. ಸ್ತ್ರೀವಾದಿ ಚಿಂತನೆಗಳು ಶೋಧಿಸ ಬೇಕಾದ ವಲಯ ಇದು ಎಂಬ ಅವರ ಮಾತು ನನಗೆ

ಯಾಕೋ ಮಹಿಳಾ ಚಳವಳಿ ಮತ್ತು ಸಾಹಿತ್ಯದ ಸಂಬಂಧಗಳ ಬಗ್ಗೆಯೇ ಒಂದು ಆಳವಾದ ಪ್ರಶ್ನೆಯನ್ನು ನನ್ನಲ್ಲಿಯೇ ಹುಟ್ಟು ಹಾಕುತ್ತದೆ. ಈ ಇಪ್ಪತ್ತು ವರ್ಷಗಳಲ್ಲಿ ಭಾರತದ ಮಹಿಳಾ ಚಳವಳಿ 'ಅಧಿಕಾರ'ದ ಕಲ್ಪನೆಯ ಬಗ್ಗೆ ಕ್ರಿಯಾಶೀಲವಾಗಿ, ರಚನಾತ್ಮಕವಾಗಿ ನಡೆಸಿದ ಹೋರಾಟ, ಸಂವಾದ, ಚರ್ಚೆ ಸಾಹಿತ್ಯ ಮೀಮಾಂಸೆಯ ಪರಿಭಾಷೆಯಲ್ಲಿ ಯಾವ ಒಂದು ಪ್ರಭಾವವನ್ನೂ ಕೂಡಾ ಉಂಟು ಮಾಡಿಲ್ಲವೇ ? ಮತ್ತೆ 'ಅಧಿಕಾರ'ದ ತಾತ್ವಿಕ ಸ್ವರೂಪ ನಿರ್ವಚನೆಯಾಗಬೇಕು, ಸ್ತ್ರೀವಾದಿ ಚಿಂತನೆಗಳು ಅತ್ಯಗತ್ಯವಾಗಿ ಶೋಧಿಸಬೇಕಾದ ವಲಯ ಇದು ಎಂಬಲ್ಲಿಂದಲೇ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಪ್ರಾರಂಭವಾಗಬೇಕಿದೆಯೋ ಎಂಬುದೇ ನನಗೆ ಬೃಹದಾಕಾರದ ಪ್ರಶ್ನೆಯಾಗಿ ಕಾಡಿದ್ದು. ಇಪ್ಪತ್ತು ವರ್ಷಗಳ ಭಾರತದ ಮಹಿಳಾ ಚಳವಳಿಯ ಹಂತಗಳು ಸಂಸ್ಕೃತಿಯ ಮೀಮಾಂಸೆಯ ಮೇಲೆ, ಸಾಹಿತ್ಯ ಮೀಮಾಂಸೆಯ ಮೇಲೆ ಬೀರಿರುವ ಪ್ರಭಾವ ಜೀರೋ ಎನ್ನುವುದು ಒಂದು ಕಡೆ ಮಹಿಳಾ ಚಳವಳಿಯ ದುರಂತವಾಗಿ ನನಗೆ ಕಂಡರೆ, ಇನ್ನೊಂದೆಡೆ ಪ್ರಭುತ್ವಾಧಿಕಾರದ ಆಯಸ್ಕಾಂತದ ಹೊರಗಡೆ ಇರುವ ಮಹಿಳಾ ಸಂಘಟನೆಗಳು ಸ್ವಂತ ಶಕ್ತಿವಲಯವನ್ನು ಹೆಚ್ಚು ಸಮಗ್ರಗೊಳಿಸುವ ವಿಧಾನಗಳು ಸಾಹಿತ್ಯ ವಿಮರ್ಶಕರ ಗಮನ ಸೆಳೆಯದೆಯೇ ಹೋಗುತ್ತದೆ ಎಂಬುದು ಇನ್ನೊಂದು ಕಡೆ ಸಾಹಿತ್ಯ ವಿಮರ್ಶಕರ ದುರಂತವಾಗಿಯೂ ಕೂಡಾ ನನಗೆ ಕಂಡದ್ದಿದೆ. ಈ ಹಂತದಲ್ಲಿ ಸಾಹಿತ್ಯ ಹಾಗೂ ಚಳವಳಿಯ, ವಿಶೇಷವಾಗಿ ಮಹಿಳಾ ಚಳವಳಿಯ ಅವಿರ್ಭಾವ ಸಂಬಂಧವನ್ನು ಚರ್ಚಿಸುವುದು ಅಗತ್ಯವಾಗುತ್ತದೆ.

### ಸಾಹಿತ್ಯ–ಮಹಿಳಾ ಚಳುವಳಿಯ ಸಂಬಂಧ

ಕನ್ನಡ ಸಾಹಿತ್ಯದ ಸದ್ಯದ ಸಂದರ್ಭದಲ್ಲಿ ಸಾಹಿತ್ಯ ಹಾಗೂ ಮಹಿಳಾ ಚಳುವಳಿಯ ಸಂಬಂಧದಲ್ಲಿ ಅಷ್ಟೊಂದು ಅಗಾಧತೆ ಕಾಣಿಸುವುದಿಲ್ಲ. ಚಳುವಳಿಯ ಜೊತೆ ನೇರ ಸಂಪರ್ಕ ಇರುವ ಕೃತಿಗಳಲ್ಲಿ ಕಾಣುವ ವೈವಿಧ್ಯತೆ ವೈಯಕ್ತಿಕ ಹಂತದಲ್ಲಿ ಬರುವ ಕೃತಿಗಳಲ್ಲಿ ಕಾಣಿಸುವುದಿಲ್ಲ. ಸ್ವಾತಂತ್ರ್ಯ ಪೂರ್ವದ ಲೇಖಕಿಯರ ಮೇಲಿದ್ದ ಗಾಂಧಿಯ ಹಾಗೂ ಸ್ವಾತಂತ್ರ್ಯ ಚಳುವಳಿಯ ಪ್ರಭಾವದಿಂದಾಗಿ ಹಲವಾರು ಆಯಾಮಗಳ ಶೋಧನೆಗಳನ್ನು ಅಲ್ಲಿ ಕಾಣಬಹುದಿತ್ತು. ಕಲ್ಯಾಣಮ್ಮ ಒಂದು ಸಂಸ್ಥೆಯಾಗಿ ಬೆಳೆಯುವಲ್ಲಿಯೂ ಇದು ಕಾರಣವಿರಬಹುದು. ಸಾವಿತ್ರಮ್ಮನವರ ಬರಹಗಳಲ್ಲಿ ಇಂತಹ ಪ್ರಭಾವವನ್ನು ನಾವು ಗುರುತಿಸಬಹುದಾಗಿದೆ. ವಚನ ಸಾಹಿತ್ಯ ಸಂದರ್ಭದಲ್ಲಿ ಅಕ್ಕಮಹಾದೇವಿಯ ಜೊತೆಗೆ ಇತರ ವಚನಕಾರ್ತಿಯರಿಗೂ ಇದ್ದ ಆ ಚಳುವಳಿಯ ಆ ನೇರ ಸಂಬಂಧ, ಅವರ ವಚನಗಳ ಮೇಲೆ ಬೀರಿದ ವಿಶಿಷ್ಟ ಪ್ರಭಾವ ನಮಗೆ ಎದ್ದು ಕಾಣುತ್ತದೆ. ಇಂದಿನ ಸಂದರ್ಭದಲ್ಲಿಯೂ ಕೂಡಾ ವಿಜಯಾ ದಬ್ಬೆ, ಸುಮಿತ್ರಾಬಾಯಿ ಹಾಗೂ ನೇಮಿಚಂದ್ರ ಇವರಿಗೆ ಮಹಿಳಾ ಚಳುವಳಿಯೊಳಗಿನ ಭಾಗವಾಗಿರುವುದರಿಂದ ಇತಿಹಾಸದ ಹೆಜ್ಜೆಗಳಲ್ಲಿ ಲೇಖಕಿಯ - ಹೆಜ್ಜೆಗಳನ್ನು ಗುರುತಿಸುವುದು ಸಾಧ್ಯವಾಗಿದೆ ಮಾತ್ರವಲ್ಲ, ಲೇಖಕಿಯರ ಸಾಹಿತ್ಯ ಇತಿಹಾಸದ ಮೇಲೆಯೇ ಹೊಸ ಬೆಳಕು ಚೆಲ್ಲುವಲ್ಲಿ ಹೆಚ್ಚಿನ ಒಂದು ಕಾಳಜಿ ಕಂಡುಬರುತ್ತದೆ. ಬೆಳಗೆರೆ ಜಾನಕಮ್ಮನವರಂತಹ ಕೇಳರಿಯದ ಕವಿಯತ್ರಿಯರ ಹೆಸರು ಮತ್ತೆ ದಾಖಲಾಗಿಸುವುದು ಸಾಧ್ಯವಾಗಿದೆ. ಅಲ್ಲಿ ಇಲ್ಲಿ ಛಿದ್ರವಾಗಿ ಹೋಗಿದ್ದರೂ ಮಹಿಳಾ ಸಂಘಟನೆಗಳೊಳಗೆ, ಚಳವಳಿಯೊಳಗೆ ಒಂದು ಲಯ ಇದೆ. ಸಾಹಿತ್ಯ, ಸಾಹಿತ್ಯ ವಿಮರ್ಶೆಯ ಪರಿಭಾಷೆಯಲ್ಲಿ ಆ ಲಯವನ್ನು ಗುರುತಿಸುವುದು, ದಾಖಲಿಸುವುದು ಅಗತ್ಯ, ಅನಿವಾರ್ಯ ಎನ್ನುವ ಕಾರಣಕ್ಕಾಗಿ ಮೇಲಿನ ಮಾತುಗಳನ್ನು ಬರೆಯುತ್ತಿದ್ದೇನೆ. ಚಾರಿತ್ರಿಕ ಸಾಹಿತ್ಯ ಶೋಧನೆಯೇ ಸದ್ಯಕ್ಕೆ ಸಾಹಿತ್ಯ ವಿಮರ್ಶೆಯಲ್ಲಿ ಆಕೃತಿಯಾದ ಹಾಗೆ ನಮ್ಮ ಬದುಕಿನ ಹೆಜ್ಜೆಗಳ ಶೋಧನೆಯೇ ಇಂದು ಸೃಜನಶೀಲ ಸಾಹಿತ್ಯದ ಆಶಯ/ಆಕೃತಿಗಳಾಗಬೇಕಿದೆ. ಸ್ತ್ರೀ ಬದುಕಿನ ಸಮಗ್ರತೆ ಮೂಡಬೇಕಿದೆ. ಹಾಗಾಗಿ ಶೋಷಣೆಯನ್ನೇ ಆಕೃತಿಯಾಗಿಟ್ಟುಕೊಳ್ಳುವ ಸಾಹಿತ್ಯ, ವಿಮರ್ಶೆಯ ಪರಿಭಾಷೆ ಸ್ತ್ರೀವಾದಿಗಳ ಬದುಕಿನ, ಸಾಹಿತ್ಯದ ವಿಷನ್ ಅಲ್ಲ. ಆಗಿರಕೂಡದು ಕೂಡಾ. ಅಂತಿಮವಾಗಿ ಶೋಧನೆಯೇ ಸ್ತ್ರೀವಾದಿ ಬದುಕಿನ ಬರಹದ, ವಿಮರ್ಶೆಯ ಆಕೃತಿ, ರೂಪಗಳಾಗಿ ಮೂಡಿ ಬರುವುದು ಅಗತ್ಯವಾಗುತ್ತದೆ. ವಿಮರ್ಶೆಯ ಪರಿಭಾಷೆ ಕೂಡಾ 'ಶೋಧನೆಯ' ಹಂತದಿಂದಲೇ ಪ್ರಾರಂಭವಾಗಬೇಕಾಗುತ್ತದೆ. ಈ ಹಂತದಲ್ಲಿ ವಿಮರ್ಶೆಯಲ್ಲಿ ಚರ್ಚೆಯಾಗುತ್ತಿರುವ ಸ್ತ್ರೀತ್ವ/ಸ್ತ್ರೀತನದ ಬಗ್ಗೆ ಚರ್ಚಿಸುವುದು ಅಗತ್ಯವಾಗುತ್ತದೆ.

## ಸ್ತ್ರೀತ್ವ / ಸ್ತ್ರೀತನ

ಸಾಹಿತ್ಯದಲ್ಲಿ ಸ್ತ್ರೀತನ, ಸ್ತ್ರೀತ್ವದ ಅಭಿವ್ಯಕ್ತಿಯಾಗಬೇಕು ಎನ್ನುವುದು ಈಗ ಕೇಳಿಬರುತ್ತಿರುವ ಮಾತು. ವಿಶಿಷ್ಟ ಬಗೆಯ ಅನುಭವಗಳು ಎಂಬ ರೀತಿಯಲ್ಲಿ ಈ ಮಾತು ಕೇಳಿಬರುತ್ತಿದೆ. ಸ್ತ್ರೀತ್ವ, ಸ್ತ್ರೀತನದ ಅಭಿವ್ಯಕ್ತಿಗೆ ಉದಾ : ಎಂ.ಕೆ.ಇಂದಿರಾರವರ 'ಫಣಿಯಮ್ಮ'; ಮಹಾಶ್ವೇತದೇವಿಯವರ 'ಸ್ತನದಾಯಿನಿ' ವೈದೇಹಿಯವರ ಬರಹಗಳು ಇಂತಹ ಕೃತಿಗಳನ್ನು ಹೆಸರಿಸಲಾಗುತ್ತದೆ. ಸ್ತ್ರೀವಾದ ಎತ್ತುವ ಸವಾಲುಗಳನ್ನು ಎತ್ತದೇ ಸ್ತ್ರೀ ಬದುಕಿನ ಆಯಾಮಗಳನ್ನು ಇವು ನಿರಪಾಯಕಾರಿಯಾಗಿ ಬಿತ್ತರಿಸುತ್ತವೆ. ಇಲ್ಲಿರುವ ವೈಚಾರಿಕ ಲೋಕವು ಪುರುಷರಿಗೆ ನಿರಪಾಯಕಾರಿ ಎನಿಸುವುದರಿಂದ ಈ ಬಗೆಯ ಅನುಭವಗಳು ಸ್ತ್ರೀ ವಿಶಿಷ್ಟ ಅನುಭವಗಳು ಎಂದು ಪರಿಗಣಿತವಾಗುತ್ತವೆ. ಇಲ್ಲಿ ಹೆಣ್ಣಿನ ಶೋಷಣೆಯನ್ನು, ಹಿಂಸೆಯನ್ನು, ನವಿರಾಗಿ, ಸೂಕ್ಷ್ಮವಾಗಿ ಬಿಚ್ಚಿಡಲಾಗುತ್ತದೆ. 'ಸ್ತನದಾಯಿನಿ'–ವರ್ಗ/ಸಂಪ್ರದಾಯದ ಹಿನ್ನಲೆಯಲ್ಲಿ ಹಿಂಸೆಯನ್ನು ಬಿಚ್ಚಿ ತೋರಿಸುತ್ತದೆ. ಹಾಲು ಮಾರಿಕೊಂಡು, ಕೊನೆಗೆ ಕ್ಯಾನ್ಸರ್‌ಗೆ ಬಲಿಯಾಗಿ, ಅನಾಥ ಹೆಣವಾಗಿ ಸಾಯುವ ಯಶೋದಳ ವ್ಯಕ್ತಿತ್ವ ಹೆಣ್ಣಿನ ಮೇಲೆ ನಡೆಯುವ ಹಿಂಸೆಯನ್ನು ಅನಾವರಣ ಮಾಡುತ್ತದೆಯೇ ಹೊರತು ಪ್ರಸ್ತುತದಲ್ಲಿ ನಡೆಯುವ ಸ್ತ್ರೀವಾದಿ ಸವಾಲುಗಳನ್ನಲ್ಲ. ಕೃತಿಯು 'ಆಕೃತಿ' 'ಶೋಷಣೆ'ಯಾಗುತ್ತದೆಯೇ ಹೊರತು 'ಶೋಧನೆ' ಅಲ್ಲ. ಇಲ್ಲಿನ ಅನುಭವಗಳು, ಪುರುಷ ಲೋಕದಿಂದ ಭಿನ್ನವಾದವುಗಳು ಎಂಬರ್ಥದಲ್ಲಿ ಎಲ್ಲಿಯೂ ಸವಾಲುಗಳಾಗಿ, ಸ್ಪರ್ಧಾತ್ಮಕವಾಗಿ ಧ್ವನಿಸುವುದಿಲ್ಲ, ಈ ರೀತಿಯ ಸ್ತ್ರೀತನದ ಆಧ್ಯಾತ್ಮಿಕ ಅನುಭವ ಸ್ವತಂತ್ರ್ಯ ಹೆಣ್ಣಿನ ಶೋಧನೆಯ ವಲಯವನ್ನು ಸೃಷ್ಟಿಸುವುದಿಲ್ಲ. ಸ್ವತಂತ್ರ್ಯದ ಶೋಧನೆಯೆಂದರೆ, ಹೊರಗಿನ ಬದುಕಿನ ಶೋಧನೆಯೆಂದರೆ ಪ್ರತಿರೋಧಗಳನ್ನೆದುರಿಸಲ್ಲಬೇಕಾದ್ದರಿಂದ ಸ್ಪರ್ಧಾತ್ಮಕವಾಗಿಯೇ ಉಳಿದುಬಿಡುವ ಸಂಭವವೇ ಹೆಚ್ಚು. ಸ್ಪರ್ಧಾತ್ಮಕವಾಗಿರದ, ದುರಂತಗಳಿಗೆ ಪಕ್ಕಾಗಿ ಸಂಪ್ರದಾಯದ ನೆಲೆಯಲ್ಲಿಯೇ ಹಿಂಸೆಯ ಅನಾವರಣ ಮಾಡುವಂತಹ ಅನುಭವಗಳು ಇಂದಿನ ಸಂದರ್ಭದಲ್ಲಿ ಸ್ತ್ರೀತ್ವ, ಸ್ತ್ರೀತನದ ವಿಶಿಷ್ಟತೆ ಎಂದು ಧ್ವನಿತವಾಗುತ್ತಿವೆ. ಇಂತಹ ಪ್ರಶ್ನೆಗಳನ್ನೂ ಮಹಿಳಾ ಸಾಹಿತ್ಯ, ವಿಮರ್ಶೆ, ಚಳವಳಿ ತುಂಬಾ ಸೂಕ್ಷ್ಮವಾಗಿ ನಿರ್ವಹಿಸಬೇಕಾಗುತ್ತದೆ. ಕತ್ತಿಯಂಚಿನ ಮೇಲಿನ ಸರ್ಕಸ್ ರೀತಿಯದು. ಸುಮಿತ್ರಾಬಾಯಿ ತಮ್ಮ 'ಸಾಹಿತ್ಯದಲ್ಲಿ ಸ್ತ್ರೀವಾದ'ದಲ್ಲಿ ಹೇಳುವ ಮಾತುಗಳು ಮುಖ್ಯವಾದವು. "ಕೆಲವರು ಸ್ತ್ರೀವಾದಿಗಳು ಸ್ತ್ರೀಯರ ಮೂಲಭೂತ ಸತ್ವವೊಂದಿದೆ ಎಂಬ ಗ್ರಹಿಕೆಗೆ ಪರ್ಯಾಯವಾಗಿ ತಮ್ಮದೇ ದೃಷ್ಟಿಯಿಂದ ಸ್ತ್ರೀತ್ವದ ಪರಿಗ್ರಹಿಕೆಯೊಂದನ್ನು ಬೆಳೆಸಲು ಯತ್ನಿಸಿದ್ದಾರೆ. ಹೆಣ್ಣುತನಕ್ಕೆ ಇವರು ನೀಡುವ ಲಕ್ಷಣ ವ್ಯಾಖ್ಯಾನವೇ ಆಗಲಿ, ಪ್ರಪಂಚದಲ್ಲಿ ಇರುವ ಪುರುಷ ಪ್ರಧಾನ ವ್ಯವಸ್ಥೆಯು ಹೇಳುವ ಲಕ್ಷಣ ವ್ಯಾಖ್ಯಾನವೇ ಆಗಲಿ-ಹುಟ್ಟಿನಿಂದ ಹೆಣ್ಣಾಗಿರುವುದರಿಂದ ಈ ಸ್ವಭಾವ ಅವಳದಾಗಿದೆ, ಎಂದೇ ಹೇಳುವಂಥಹವು. ಆದ್ದರಿಂದ ಈ ಎರೆಡೂ ಬಗೆಯ 'ಮೂಲಸತ್ವ' ವಾದಿಗಳು ಮಹಿಳೆಯರನ್ನು ಅವರ ಜೀವಶಾಸ್ತ್ರೀಯ ವಿಧಿಗೇ ಕಟ್ಟಿಹಾಕುವ ಸ್ವರೂಪ ಹೊಂದಿವೆ. ಕೋಮಲತೆ, ವಿನಯ, ವಿಧೇಯತೆ, ನಿಗರ್ವ, ಅಸ್ಥಿರತೆ, ಅಸಮಗ್ರತೆ. ಜಡತೆ, ಸಂಗೋಪನಾಶೀಲತೆ, ಭಾವ ಪ್ರಾಧಾನ್ಯ ಮುಂತಾದ ಲಕ್ಷಣಗಳನ್ನು ರಾಶಿಹಾಕಿ ಪರಂಪರೆಯು ಇವನ್ನು ಸ್ತ್ರೀತ್ವದ ಮೂಲಸತ್ವವೆಂದು ಪರಂಪರೆ ರೂಢಿಸಿದೆ. ಇವುಗಳಿಗೆ ಪ್ರತಿಯಾಗಿ ಕೆಲವು ಸ್ತ್ರೀವಾದಿಗಳು ಸ್ತ್ರೀಯರು ಗಟ್ಟಿಗರು, ಸಮಗ್ರರು, ಶಾಂತಿಪ್ರಿಯರು, ವಾತ್ಸಲ್ಯಪರರು ಮುಂತಾಗಿ ಇನ್ನೊಂದು ರಾಶಿ ಲಕ್ಷಣಗಳ ಪಟ್ಟಿಯನ್ನು ಎತ್ತಿ ಹಿಡಿಯುವವುದೇ ಆದರೆ ಇವರು ಪುರುಷ ಪ್ರಧಾನ ವ್ಯವಸ್ಥೆಯ ಮೂಲಸತ್ವವಾದವನ್ನೇ ಇನ್ನೊಂದು ರೀತಿ ಹೇಳುತ್ತಿರುತ್ತಾರೆ ಅಷ್ಟೇ. ಇದರಿಂದ ಹೊಸ ಪಟ್ಟಿಯಲ್ಲೂ ಸೇರಲಾರದ, ಭೂತಾಯಿಯ ಪಾತ್ರ ವಹಿಸಬಯಸದ ಮಹಿಳೆಯರನ್ನು ಈ ದೃಷ್ಟಿಗೆ ಒಗ್ಗಿಸುವಂಥ ದಬ್ಬಾಳಿಕೆ ಈ ಲಕ್ಷಣಾವಳಿಯಲ್ಲೂ ಮುಂದುವರೆಯಬಹುದು". (ಪುಟ 116, 117, ಮಹಿಳಾ ಅಧ್ಯಯನ, ಸ: ಡಾ. ವೀಣಾ ಶಾಂತೇಶ್ವರ). ಈ ಮೇಲಿನ ಮಾತುಗಳ ಹಿನ್ನೆಯಲ್ಲಿ ಸಾಹಿತ್ಯದಲ್ಲಿ 'ಸ್ತ್ರೀತನ'ದ ಬಗ್ಗೆ ನಾವು ಯೋಚಿಸಬೇಕಾಗುತ್ತದೆ. 'ಸ್ತ್ರೀತನ'ದ ಅಭಿವ್ಯಕ್ತಿಯು ಸಾಂಸ್ಕೃತಿಕ ಒತ್ತಡದಿಂದಾಗಿ ಲೇಖಕಿ ಪರಂಪರೆಯಲ್ಲಿ ಗಿರಕಿ ಹೊಡೆಯುವಂತಾಗಬಾರದು. ಈ ಅಪಾಯವನ್ನು ಗುರುತಿಸಿಕೊಂಡು ತಮ್ಮೊಳಗಿನ ಅನುಭವ, ಅನಿಸಿಕೆಗಳಿಗೆ, ಶೋಧನೆಗೆ ಲೇಖಕಿಯರು ಅಭಿವ್ಯಕ್ತಿಸುವ ಅಗತ್ಯವಿದೆ.

ರಾಘವೇಂದ್ರರಾವ್ ಎಚ್. ಎಸ್. ಹೇಳುವ ಮಾತುಗಳು ಇಲ್ಲಿ ಉಲ್ಲೇಖಾರ್ಹ.... ಹೀಗೆ ಲೇಖಕಿಯರ ಬರವಣಿಗೆಯಲ್ಲಿ ವಿಶಿಷ್ಟವಾದ ಹೆಣ್ಣುತನವನ್ನು ನಿರೀಕ್ಷಿಸುವ ಹಂಬಲ ಕೂಡಾ ಪುರುಷ ಪ್ರಧಾನ ಸಂಸ್ಕೃತಿಯ ಒತ್ತಡಗಳಿಂದಲೇ ಮೂಡಿಬಂದಿರಬಹುದು.... ಪುಟ 156, (ಮಹಿಳಾ ಅಧ್ಯಯನ, ಸಂ. ಡಾ॥ ವೀಣಾಶಾಂತೇಶ್ವರ) ಸ್ತ್ರೀತ್ವ, ಸ್ತ್ರೀತನ, ಸ್ತ್ರೀ ವಿಶಿಷ್ಟ ರೀತಿಯ ಅನುಭವಗಳು ಎಂಬ ಮಾತುಗಳು 'ಸ್ತ್ರೀ ಸಂವೇದನೆಯ' ಮುಖ್ಯ ವಾಹಿನಿಗಳಾದಾಗ್ಯೂ ಸಹ ಇವು ಸಾಂಸ್ಕೃತಿಕ ಒತ್ತಡಗಳಲ್ಲಿನ ಅಪಾಯಗಳನ್ನು ದಾಟಿ ನೆಲೆಗಳನ್ನು ಹುಡುಕುವುದು ಅಗತ್ಯವಾಗುತ್ತದೆ.

**ರಾಜಕೀಯ ದಾರ್ಶನಿಕತೆ**

ಇಂದು ಮಹಿಳಾ ಸಾಹಿತ್ಯದಲ್ಲಿ ಕಂಡು ಬರುತ್ತಿರುವ ಸಮಗ್ರತೆಯ ಕೊರತೆ ನಮ್ಮನ್ನು ದಂಗುಬಡಿಸುತ್ತದೆ. ಈ 'ಸಮಗ್ರತೆ' ಅಥವಾ ಇಂಟಗ್ರಿಟಿ ಎಂದರೇನು ಎಂಬ ಪ್ರಶ್ನೆ ನಮಗೆ ಮೂಡಿ ಬರುತ್ತದೆ. ಮಹಿಳಾ ಬದುಕಿನ ಆಯಾಮಗಳನ್ನು ಒಂದು ರಾಜಕೀಯ ದಾರ್ಶನಿಕತೆಯೊಳಗೆ ಹಿಡಿದಿಡುವ ಸಮಗ್ರತೆಯ ದೃಷ್ಟಿಕೋನ. ಚಳುವಳಿಗಳು ರಾಜಕೀಯ ದಾರ್ಶನಿಕತೆಯ ಅಭಿವ್ಯಕ್ತಿಗಳು ಎಂದು ಅರ್ಥೈಸುವುದಾದಲ್ಲಿ ವೈಯಕ್ತಿಕ-ಸಂವೇದನೆಗೆ ಚಳುವಳಿಯ ಅಭಿವ್ಯಕ್ತಿಗಳ ಮೇಳೈಸುವಿಕೆ ಅಗತ್ಯವಾಗುತ್ತದೆ. ಚಳುವಳಿಯೊಳಗಿನ ಚರ್ಚೆ, ರಚನೆ, ಕ್ರಿಯೆಗಳಲ್ಲಿ ಕಂಡು ಬರುವ ಸಂಕೀರ್ಣತೆ, ಒಳನೋಟ, ಆಯಾಮಗಳು ಇಂದು ಸಾಹಿತ್ಯದಲ್ಲಿ, ಅಭಿವ್ಯಕ್ತಿಗೊಂಡೇ ಇಲ್ಲವೇನೋ ಅನಿಸುತ್ತದೆ. ಕಾತ್ಯಾಯನಿ/ಗಾರ್ಗಿಯ ಮಾದರಿಗಳನ್ನು ಇಟ್ಟುಕೊಂಡು ಪ್ರತಿಭೆ ಮೇಳೈಸುವ ಆಲೋಚನೆಗಳನ್ನು ಮೀರಿ ಮತ್ತಷ್ಟು ಸಂಕೀರ್ಣವಾಗಿ ಮಹಿಳಾ ಸಮಸ್ಯೆಯ ಆಯಾಮಗಳು ಮುಂದುವರಿದಿವೆ. ಗೃಹವಾದಿನಿ ಆಕೃತಿಗಳೇ ಇಂದು ಭಿನ್ನ ಆಯಾಮದಲ್ಲಿ ಚರ್ಚೆಗೆ ಒಳಗಾಗುತ್ತವೆ. ಈ ಮಾದರಿಗಳನ್ನು ಹಿಡಿದುಕೊಂಡು ಸಾಹಿತ್ಯ ವಿಮರ್ಶೆಯಲ್ಲಿ ತೊಡಗುವುದೆಂದರೆ ರಿವರ್ಸ್ ಗೇರ್‌ನಲ್ಲಿ ಮಹಿಳೆಯರ ಬದುಕನ್ನು ಅರ್ಥಮಾಡಿಕೊಳ್ಳಲು ಹೊರಟಂತೆ ಕಾಣುತ್ತದೆ. ಮೇಲುನೋಟಕ್ಕೆ ವಿಮರ್ಶೆಗೆ, ಸಾಹಿತ್ಯಕ್ಕೆ ಒಂದು ತಾತ್ವಿಕ ಚೌಕಟ್ಟಾಗಿ ಕಾಣಿಸುವ ಈ ಮಾದರಿ ಒಂದು ದ್ವಂದ ಸೃಷ್ಟಿಸುವ ಬಗೆಯನ್ನು ಒಳಗೊಂಡಿದೆ. ಕಾತ್ಯಾಯಿನಿ ಮಾದರಿ, ಗಾರ್ಗಿಯ ಮಾದರಿ ಎಂದು ಡಿ. ಆರ್. ನಾಗರಾಜ್ ಬಳಸುವ ಈ ಮಾದರಿ ಒಂದು ನಾಜೂಕಿನ ಕೀಲಿ ಕೈ. ಈ ತರಹೆಯ ದ್ವಂದ್ವ ಸೃಷ್ಟಿಯಾದುದನ್ನು ಸ್ವಾತಂತ್ರ್ಯ ಪೂರ್ವ ಕಾಲದಿಂದಲೂ ನಾವು ಕಾಣುತ್ತೇವೆ. ಕಾತ್ಯಾಯಿನಿ/ಗಾರ್ಗಿ ಎಂಬುದನ್ನು ಗೃಹ/ಪ್ರಪಂಚ, ಭಾವನಾತ್ಮಕ/ವೈಚಾರಿಕ; ಭಾವನೆ/ವಿಚಾರ ಈ ತರಹದ ವಿಭಜನೆಯಲ್ಲಿ ಗುರುತಿಸಬಹುದಾಗಿದೆ. ಈ ರೀತಿ ಗೃಹ ಪ್ರಪಂಚದ ಕಲ್ಪನೆಗಳು ಘನೀಕರಿಸಲ್ಪಟ್ಟದ್ದು ರಾಷ್ಟ್ರೀಯವಾದಿ ರಾಜಕಾರಣದಲ್ಲಿ. ಪಿತೃ ಪ್ರಧಾನ ಮೌಲ್ಯ, ರಾಷ್ಟ್ರೀಯವಾದ ಬಂಡವಾಳ ಶಾಹಿತ್ವ ಹೀಗೆ ದ್ವಂದ್ವಗಳನ್ನು ಸೃಷ್ಟಿಸುತ್ತಲೇ ಹೋಗುತ್ತದೆ. ಕಾರಣಕ್ಕೆ/ಭಾವನೆ, ತಾನು/, ಅನ್ಯ, ಇತ್ಯಾದಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸುತ್ತದೆ. ಈ ಬೇರ್ಪಡಿಸುವಿಕೆಯಲ್ಲಿ ಒಂದು ಇನ್ನೊಂದಕ್ಕಿಂತ ಎತ್ತರ, ಉನ್ನತ ಎನ್ನುವಂತಹ ವಿಶ್ಲೇಷಣೆ ಇಲ್ಲಿ ಕಂಡು ಬರುತ್ತದೆ. ಡಿ. ಆರ್. ನಾಗರಾಜ್ ಪ್ರತಿಭೆ ಮೇಳೈಸುವಿಕೆಯಲ್ಲಿ ಕೊಡುವ ಮಾದರಿಗಳ ಸೃಷ್ಟಿಯಲ್ಲಿಯೇ ಒಂದು ಇನ್ನೊಂದಕ್ಕಿಂತ ಉತ್ತಮ ಎನ್ನುವ, ದ್ವಂದ್ವ ಸೃಷ್ಟಿಸುವ ಹುನ್ನಾರ ಸಾಹಿತ್ಯ ವಿಮರ್ಶೆಯಲ್ಲಿಯೂ ನಡೆದು ಬಿಡುತ್ತದೆ ಎಂಬುದು "....ಉನ್ನತಾರ್ಥದಲ್ಲಿ ಆಕೆ ಶೃಂಗಾರ ಶೀಲೆ, ಪದಾರ್ಥ ಜೀವಿ ಆಕೆಯ ಒಡನಾಟಕ್ಕೆ ಬಂದವೆಲ್ಲಕ್ಕೂ ಸ್ತ್ರೀತ್ವದ ಗುಣ, ಛಾಯೆ ಬಂದು ಬಿಡುತ್ತದೆ. ನೇತ್ಯಾತ್ಮಕವಾಗಿ ಹೇಳುವುದಾದರೆ. ಪುರುಷ ಪ್ರಧಾನ ಮೌಲ್ಯಗಳನ್ನು ಕೂಡಾ ಈಕೆ ಸಿಂಗರಿಸಿಬಿಡಿಸಬಲ್ಲಳು. **ಪ್ರಗತಿಪರ ಸ್ತ್ರೀವಾದಿಗಳು ಈಕೆಯನ್ನು ಕಂಡರೆ ಕೆಂಡಾಮಂಡಲವಾಗುತ್ತಾರೆ. ಈಕೆ ಇವರನ್ನು ಕಂಡರೆ ಹುಸಿ ನಗೆ ನಗುತ್ತಾಳೆ.** ತಾತ್ಸಾರವಿರಬೇಕು. ಇಲ್ಲ ಹಾಸ್ಯಪೂರಿತ ಕುತೂಹಲವಿರಬೇಕು. 'ಗೃಹದೇವತೆ' ಸಿದ್ಧಾಂತದ ಸಾಕಾರ ರೂಪ ಈಕೆ". (ಪುಟ. 128 ಭಾರತೀಯ ಸ್ತ್ರೀವಾದ. 1993) ಕಾತ್ಯಾಯನಿ ಮಾದರಿಯ 'ಗೃಹದೇವತೆ'ಯನ್ನು ಡಿ. ಆರ್. ಎನ್. ರವರು ಮೇಲ್ಕಂಡ ರೀತಿಯಲ್ಲಿ ಅರ್ಥೈಸುತ್ತಾರೆ. ಜೊತೆಗೆ ಪ್ರಗತಿಪರ ಸ್ತ್ರೀವಾದಿಗಳು ಈಕೆಯನ್ನು ಕಂಡರೆ ಕೆಂಡಾಮಂಡಲವಾಗುತ್ತಾರೆ ಎಂಬ ತಮ್ಮ ಗ್ರಹಿಕೆಯನ್ನೂ ಇಡುತ್ತಾರೆ. ಹೀಗೆ ದ್ವಂದ್ವ ಸೃಷ್ಟಿಸುವ, ವಿಭಜಿಸುವ

ಮಾದರಿಗಳಿಂದ ಸಾಹಿತ್ಯದಲ್ಲಿ ನಾವು ಬಯಸುವ 'ಸಮಗ್ರತೆ', 'ದಾರ್ಶನಿಕತೆ', ಹುಟ್ಟಿಕೊಳ್ಳಲಾರದು.

ಬದಲಾಗಿ ಇಂತಹ ವಿಭಜನೆಗಳನ್ನು ಘನೀಕರಿಸುತ್ತಾ ಹೋಗಿ ಬದುಕಿನ ಸಾಹಿತ್ಯದ ಆಯಾಮಗಳ ಸಂಕೀರ್ಣತೆಯನ್ನು ಸರಳೀಕರಿಸುತ್ತಾ ಹೋಗುವ ಅಪಾಯಗಳೇ ಹೆಚ್ಚು. ವೈವಿಧ್ಯಮಯ ಬದುಕಿನ ಆಯಾಮಗಳಲ್ಲಿ ಮೂಡಿ ಬರುವ ರಾಜಕೀಯ ದಾರ್ಶನಿಕತೆ ಮಹಿಳೆಯರ ಗೃಹ/ಪ್ರಪಂಚ ದ್ವಂದ್ವಗಳ ಮೀರಿದ ಒಂದು 'ಆಕೃತಿ' ಯನ್ನು ಸಾಹಿತ್ಯ ಕೃತಿಗೆ ಒದಗಿಸಿ ಕೊಡುವ ಸಾಧ್ಯತೆಗಳತ್ತಲೇ ಲೇಖಕಿಯರು ಇಂದು ಯೋಚಿಸಬೇಕಾಗಿದೆ. ಇಂತಹ 'ಆಕೃತಿ' ಮಹಿಳಾ ಸಾಹಿತ್ಯಕ್ಕೆ ಒಂದು 'ಸಮಗ್ರತೆ'ಯ ದೃಷ್ಟಿಕೋನವನ್ನೂ ಕೂಡಾ ಒದಗಿಸಿ ಕೊಡುವ ಸಾಧ್ಯತೆ ಹೊಂದಿರುತ್ತದೆ.

●

---

# ನಾನು !

ತೊಡೆಯ
ಸಂದಿನೊಳಗೆ
ಮೊಲೆಗಳ
ಮೆತ್ತೆಯಲಿ
ಹುಡುಕಬೇಡ
ನನ್ನ
ಕತೆ, ಕಾವ್ಯದ
ಸಾಲುಗಳಲಿ
ಹಿಡಿಯಲಾರೆ
ನನ್ನ
ಹೊಗಳಿಕೆಯಲಿ
ಬಂಧಿಸಬೇಡ
ಜರಿದು
ಜಂಭ ಪಡಬೇಡ
ದಕ್ಕದಿದ್ದರೆ
ಮಾಯೆ ಎನಬೇಡ
ನೀ
ಎಸಿಣಿದಂತೆ
ನಾನಲ್ಲ
ನಿನ್ನೆದೆಯ ಮೇಲೆ
ಪೋಣಿಸಿದ ಮಣಿಯಲ್ಲ
ನದಿ
ನಾನಲ್ಲ
ಹಸಿರು
ನಾನಲ್ಲ
ಮಣ್ಣಂತೂ
ಅಲ್ಲ

ಹೆಣ್ಣೆಂದು
ಚಪ್ಪರಿಸಬೇಡ
ಹಾವೆಂದು
ಮೋಹಿಸಬೇಡ
ಹುಟ್ಟು
ಮೊದಲಲ್ಲ
ಸಾವು
ನನ್ನ. ಕೊನೆಯಲ್ಲ
ಎಲ್ಲ ನಾನಲ್ಲ
ನಾನಷ್ಟೆ, ನಾನಲ್ಲ
ಬೇಕಿದ್ದರೆ
ಗಾಳಿ, ಗಂಧದೊಳಗೆ
ಬೆಳಗು, ರಾತ್ರಿ
ಒಂದಾಗುವಲ್ಲಿ
ಹುಡುಕು
ಮೈಯ
ನರಗಳೆಲ್ಲ
ಒಂದನ್ನೆ
ಬಯಸುವಂತೆ
ಧ್ಯಾನಿಸು
ನನ್ನೊಳಗೆ
ನೀನಾಗಿ
ನಾನ್ಯಾರೊ
ನೀನ್ಯಾರೊ
ತಿಳಿಯದಾಗುವೆ

○ ಸರಸ್ವತಿ ಡು.

# ಮಿರಿಯಂ ಚ್ಯಾಲಿ

**ಮಿರಿಯಂ ಚ್ಯಾಲಿ ದಕ್ಷಿಣ ಆಫ್ರಿಕಾದ ಹೆಸರಾಂತ ಬರಹಗಾರ್ತಿ. ಬಿಳಿಯರ ಆಳ್ವಿಕೆಯಲ್ಲಿ ಇವರ 'ಮ್ಯೂರಿಯಲ್ ಎಟ್ ಮೆಟ್ರೋಪಾಲಿರ್ಟ' ಹಾಗೂ 'ಅಮೆಂಡಲ' ಎರಡೂ ಕೃತಿಗಳೂ ಬಹಿಷ್ಕೃತಗೊಂಡಿದ್ದವು. ಇಧೀಗ ಬಿಳಿಯರ ಆಳ್ವಿಕೆ ಕೊನೆಗೊಂಡು ನೆಲ್ಸನ್ ಮಂಡೆಲಾ ಅಧಿಕಾರ ಸ್ವೀಕರಿಸಿದ್ದಾರೆ. ಬಿಳಿಯರ ಆಳ್ವಿಕೆಯಲ್ಲಿ ಲೇಖಕಿಯರ ಸಂವೇದನೆ ಹಾಗೂ ದ. ಆಫ್ರಿಕಾದ ಮಹಿಳೆಯರ ಸ್ಥಿತಿ - ಗತಿಗಳು ಹೇಗಿದ್ದವು ಎಂಬುದರ ಮೇಲೆ ಬೆಳಕು ಚೆಲ್ಲುವುದಕ್ಕಾಗಿ 1984ರಲ್ಲಿ ಮಿನಕೆ ಸಿಪರ್‌ಗೆ ನೀಡಿದ ಮಿರಿಯ್ಮಂ ಚ್ಯಾಲಿ ಅವರ ಸಂದರ್ಶನದ ಭಾಗಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇನೆ. ಈ ಸಂದರ್ಶನವನ್ನು 'ಅನ್‌ಹರ್ಡ ವರ್ಡ್ಸ್' (ಸಂಪಾದಕಿ : ಮಿನಕೆ ಸಿಪರ್)ನಿಂದ ಆಯ್ದುಕೊಂಡು ಅನುವಾದಿಸಲಾಗಿದೆ.**

ಸಂಸ್ಕೃತಿಯನ್ನು ನಾನು ಬದುಕುವ ಹಾದಿಯಾಗಿ ನೋಡುತ್ತೇನೆ. ಸಂಸ್ಕೃತಿಯೆಂದರೆ ನಮಗೆ ಬದುಕಲು ಪ್ರಯತ್ನಿಸುವ ರೀತಿಯಾಗಿದೆ. ಬದುಕುವ ಹೋರಾಟ ನಿತ್ಯ ಬದುಕಿನದು, ಜೊತೆಗೆ ಬರೆಯಬೇಕೆಂದರೆ ಅನೇಕ ಸಮಸ್ಯೆಗಳಿವೆ. ನಿಮಗೆ ಮೆಟೀರಿಯಲ್ ಬೇಕು, ಪುಸ್ತಕಾಲಯಗಳು ಅನತಿ ದೂರದಲ್ಲಿ ಇರುತ್ತವೆ ಅಥವಾ ಬಿಳಿಯರ ವಲಯದೊಳಗೆ ಇರುವುದರಿಂದ ದಕ್ಕುವುದು ಕಷ್ಟ. ಅನೇಕ ರೀತಿಗಳಲ್ಲಿ ನಮ್ಮ ಸ್ಥಿತಿಯನ್ನು ಬಿಳಿಯ ಹೆಂಗಸರ ಸ್ಥಿತಿಗೆ ಹೋಲಿಸಲಾಗುವುದಿಲ್ಲ. ನಾವು ರಾಜಕೀಯ ವ್ಯವಸ್ಥೆಯಿಂದಾಗಿ ಎಲ್ಲಾ ರೀತಿಯಿಂದಲೂ ತುಳಿಯಲ್ಪಟ್ಟಿದ್ದೇವೆ, ಅವರಿಗೆ ಹಾಗಲ್ಲ, ಇದು ಕರಿಯ ಗಂಡಸು ಹಾಗೂ ಹೆಂಗಸಿಗೆ ಸಮನಾಗಿ ಅನ್ವಯವಾಗುತ್ತದೆ. ಆದರೆ ಹೆಂಗಸರಿಗೆ ಇರುವ ಸಮಯ ಕಡಿಮೆ. ಏಕೆಂದರೆ ಅವರು ಹೊರಗೆ ದುಡಿಯುವುದರ ಜೊತೆಗೆ ಮನೆಯ ಕೆಲಸಗಳನ್ನೂ ನೋಡಿಕೊಳ್ಳಬೇಕಾಗುತ್ತದೆ. ಕರಿಯ ಗಂಡಸರು ಮನೆಗೆಲಸ ಮಾಡುವುದು ಅಪರೂಪದ ವಿಚಾರ. ಇದರಿಂದ ಅರ್ಥವಾಗುವುದೆಂದರೆ ಗಂಡಸರು ಬರೆದಷ್ಟು ಹೆಂಗಸರು ಬರೆಯಲಾರರು.

**ಮೌಖಿಕ ಸಾಹಿತ್ಯ ಕರಿಯರ ವಲಯಗಳಲ್ಲಿ ಜೀವಂತವಾಗಿದೆಯೇ ?**

'ನಮ್ಮ ದೇಶದಲ್ಲಿ ಹೆಂಗಸರು ಯಾವಾಗಲೂ ಕತೆ ಹೇಳುವವರಾಗಿದ್ದಾರೆ. ಮಕ್ಕಳು ಸುತ್ತ ಕುಳಿತು ಹಳೆಯ ಕತೆಗಳನ್ನು ಕೇಳುತ್ತಿದ್ದುದುಂಟು. ಇಂತಹ ಸಂಗತಿಗಳಿಗೆ ಒಂದು ಸಂದರ್ಭವಿತ್ತು. ಆದರೆ ಕೈಗಾರಿಕೀಕರಣದಿಂದಾಗಿ ಮಹಿಳೆಯರೂ ದುಡಿಮೆಗಾರರಾಗಿದ್ದಾರೆ. ಪಟ್ಟಣಗಳಲ್ಲಿ ಬಾಡಿಗೆ ಹಾಗೂ ಇತರ ದುಬಾರಿ ಖರ್ಚುಗಳಿವೆ. ಹಾಗಾಗಿ ಇಂತಹ ಉಪಯೋಗವಿಲ್ಲದ ಸಂಗತಿಗಳಿಗೆ ಅತ್ಯಂತ ಕಡಿಮೆ ಸಮಯ ಉಳಿಯುತ್ತದೆ. ಬಹಳಷ್ಟು ಜನ ಹೆಂಗಸರು ಇಂದಿಗೂ ಸಂಪ್ರದಾಯಬದ್ಧ ಕತೆಗಳನ್ನು ನೆನೆಸಿಕೊಳ್ಳುತ್ತಾರೆ. ಕೆಲವರು ಉತ್ತಮವಾಗಿ ಕತೆ ಹೇಳುವವರು ಹಾಗೂ ಕಾಲ್ಪನಿಕ ಶಕ್ತಿ ಇರುವವರು. ಆದರೆ ಇದಕ್ಕೆ ಸಮಯ, ನೆಮ್ಮದಿ ಹಾಗೂ ಪ್ರಶಾಂತ ವಾತಾವರಣ ಬೇಕಾಗುತ್ತದೆ. ಅದನ್ನು ನಾವು ಹೊಂದಿಲ್ಲ. ಜೊತೆಗೆ ಮಕ್ಕಳು ಈಗ ಕತೆಯ ಬಗ್ಗೆ ಆಸಕ್ತಿಯನ್ನೂ ಹೊಂದಿಲ್ಲ ಬದಲಾಗಿ ಅವರು ಟಿ.ವಿ.ಗೆ ಮೊರೆಹೊಕ್ಕಿದ್ದಾರೆ.

ಹಳಬರು ಹೇಳಬಲ್ಲ ಇಂತಹ ಕತೆಗಳನ್ನು ಇಂದಿನ ಯುವತಿಯರು ರೆಕಾರ್ಡ್ ಮಾಡುವುದು ಒಂದು ಉತ್ತಮ ವಿಚಾರ. ಇಲ್ಲದಿದ್ದರೆ ನಮ್ಮ ಮೌಖಿಕ ಸಾಹಿತ್ಯ ಹಳಬರೊಂದಿಗೇ ಸತ್ತು ಹೋಗುತ್ತದೆ. ನಮ್ಮಲ್ಲಿ ಹಲವರು ಇದು ಎಷ್ಟು ಮುಖ್ಯ ಎಂದು ಅರಿತುಕೊಂಡಿದ್ದೇವೆ. ಹಾಗೂ ನಾವು ಒಂದಷ್ಟು ಜನ ಲೇಖಕಿಯರು ಒಟ್ಟಾಗಿ ಈ ಹಂತದಲ್ಲಿ ಕೆಲಸ ಮಾಡುವುದಕ್ಕೆ ಯೋಚಿಸಿದ್ದೇವೆ. ಅತ್ಯಂತ ಕಷ್ಟದ ಮಾತೆಂದರೆ ಸಮಯ. ದಿನನಿತ್ಯದ ಸಂಗತಿಗಳೊಂದಿಗೆ ಅನೇಕ ಸಾಮಾಜಿಕ ಸಂಗತಿಗಳಿರುತ್ತವೆ. ಅಷ್ಟೊಂದು

ಅಪಘಾತ, ಹೊಡೆದಾಟಗಳಲ್ಲಿ ಯಾವಾಗಲೂ ಅಂತಿಮ ಸಂಸ್ಕಾರಗಳು. ಅಂತಿಮ ಸಂಸ್ಕಾರ ಒಂದು ಸಾಮಾಜಿಕ ಘಟನೆ. ಅಲ್ಲಿ ಭಾಗವಹಿಸುವುದನ್ನು ನಿರೀಕ್ಷಿಸಲಾಗುತ್ತದೆ. ಇದೇ ರೀತಿ ಚರ್ಚಿನ ಹಬ್ಬ ಹಾಗೂ ವಿವಾಹಗಳು. ಇಂದಿನ ದಿನಗಳಲ್ಲಿ ಮೌಖಿಕ ಸಾಹಿತ್ಯಕ್ಕೆ ಉಳಿದಿರುವ ಸಮಯ ತೀರಾ ಅಲ್ಪ.

**ಯಾವ ಪ್ರಕಾರದ ಬಗ್ಗೆ ಲೇಖಕಿಯರು ಹೆಚ್ಚು ಒಲವು ತೋರಿಸುತ್ತಾರೆ ?**

ನಮ್ಮಲ್ಲಿ ಸಾಕಷ್ಟು ಜನ ಮಹಿಳಾ ಪತ್ರಿಕೋದ್ಯಮಿಗಳಿದ್ದಾರೆ. ಫಾತಿಮಾ ಡೈಕ್ ಎನ್ನುವ ಒಬ್ಬ ಒಳ್ಳೆಯ ನಾಟಕ ರಚನೆ ಮಾಡುವವರಿದ್ದಾರೆ. ಆಕೆಯೊಬ್ಬಳೇ ಆಕೆಯ ನಾಟಕ ಪ್ರಕಟಿಸಿರುವುದು. ಬಹಳಷ್ಟು ಜನ ಲೇಖಕಿಯರು ಕಾವ್ಯವನ್ನೇ ಪ್ರಮುಖವಾಗಿ ಬರೆಯುತ್ತಾರೆ. ಇರುವ ಸ್ಥಿತಿಯಿಂದಾಗಿ ಸಣ್ಣ ಕತೆಗಳು ಹಾಗೂ ಕಾವ್ಯವೇ ಸಹಜವಾಗಿ ಅತ್ಯಂತ ಪ್ರಸಿದ್ಧ ಮಾಧ್ಯಮಗಳಾಗಿವೆ. ಒಮ್ಮೆ ನಿಮ್ಮ ತಲೆಯಲ್ಲಿರುವ ಸಂಗತಿ ಸ್ಪಷ್ಟವಾದರೆ ಸಣ್ಣ ಕತೆಯನ್ನು ಬರೆಯಲಿಕ್ಕೆ ಹೆಚ್ಚು ಸಮಯ ಬೇಡ, ಇನ್ನಿತರ ಸಂಗತಿಗಳಲ್ಲಿ ತೊಡಗಿದಾಗ್ಯೂ ಇದನ್ನು ಬರೆದು ಬಿಡಬಹುದು. ಹೆಚ್ಚು ಮಂದಿ ಲೇಖಕಿಯರು ಒಂದು ಪುಸ್ತಕವನ್ನೂ ಪ್ರಕಟಿಸಿಲ್ಲ. ಅವರು ಹೆಚ್ಚಾಗಿ ದಿನಪತ್ರಿಕೆಗಳಲ್ಲಿ ಹಾಗೂ ಮ್ಯಾಗಜೈನ್‌ಗಳಲ್ಲಿ ಬರೆಯುತ್ತಾರೆ. ದ. ಆಫ್ರಿಕಾದ ಕರಿಯರಿಗೆ ಯಾವುದನ್ನೇ ಆಗಲಿ ಪುಸ್ತಕ ರೂಪದಲ್ಲಿ ಪ್ರಕಟಿಸಲು ಇರುವ ಅವಕಾಶಗಳು ಸೀಮಿತವಾದವುಗಳು.

**ಸೊವೇಟೋನಲ್ಲಿ ನೀವು ಬರೆದು ಪ್ರಕಟಿಸಿದ ಪುಸ್ತಕ 1975ರಲ್ಲಿ ಅಪರೂಪದ್ದು ಎಂದು ಎಣಿಸಲಾಗಿತ್ತು. ಅದು ಹೇಗೆ ಸಾಧ್ಯವಾದದ್ದು ಮತ್ತು ಅನಂತರ ಏನು ನಡೆಯಿತು ?**

ನಾನು ಇಂದು ಬರಹಗಾರ್ತಿಯಾಗಿರುವುದಕ್ಕೆ ಹೆಂಗಸಾಗಿರುವ ನನ್ನ ಸ್ಥಿತಿಗೆ ನಾನು ಋಣಿಯಾಗಬೇಕಿದೆ. ನನ್ನ ಕೆಲಸವನ್ನು ಒತ್ತಾಯ ಪೂರ್ವಕವಾಗಿ ಬಿಡಬೇಕಾದ ಸ್ಥಿತಿ ಇತ್ತು. ಏಕೆಂದರೆ ನನ್ನ ಅತ್ತೆಗೆ ಗುಣಮುಖರಾಗಲಾರದ ಕಾಯಿಲೆ. ಕೊಠಡಿಯ ಸೌಲಭ್ಯವಿರುದುದು ಹಾಗೂ ಸಮಯದ ಅಭಾವದಿಂದ ಉಲ್ಬಣಗೊಂಡ ರೋಗಿಗಳನ್ನು ಮನೆಗೆ ಕಳಿಸಿಬಿಡುತ್ತಿದ್ದರು. ನಾನು ನಾಲ್ಕು ವರ್ಷಗಳ ಕಾಲ ಅಂದರೆ ಆಕೆ ಸಾಯುವವರೆಗೂ ಆಕೆಯ ಸೇವೆ ಮಾಡಿದೆ. ನರಳಿದಾಗ, ಕರೆದಾಗ ತಕ್ಷಣವೇ ಆಕೆಯ ಬಳಿ ಧಾವಿಸುತ್ತಿದ್ದೆ. ಉಳಿದ ಸಮಯದಲ್ಲಿ ನಲವತ್ತು ವರ್ಷ ಹಳೆಯದಾದ ರೆಮಿಂಗ್‌ಟನ್‌ನಲ್ಲಿ ಕುಳಿತು ನಾನು ನನ್ನ ಮೊದಲ ಕಾದಂಬರಿಗಾಗಿ ಕೆಲಸ ಮಾಡಿದೆ. ಐದು ವರ್ಷಗಳ ಕಾಲ ಅದು ಪ್ರಕಟಗೊಂಡಿರಲಿಲ್ಲ. ಅದು ಬಹಿಷ್ಕೃತವಾಗಬಹುದು ಎಂಬ ಹೆದರಿಕೆಯಿಂದ ಪ್ರಕಾಶಕ ಅದರಲ್ಲಿ ಹಲವಾರು ಬದಲಾವಣೆಗಳನ್ನು ಅಪೇಕ್ಷಿಸಿದ್ದನು. ದೀರ್ಘಕಾಲದವರೆಗೆ ಅನುಮತಿ ನೀಡಲು ನಾನು ತಿರಸ್ಕರಿಸಿದೆ. ನನ್ನ ಸ್ವಂತ ತಾಯಿ ನನ್ನ ಪುಸ್ತಕವನ್ನು ನೋಡಲು ಬಹುಶಃ ಆಕೆ ಇರುವುದಿಲ್ಲ ಎಂದು ಹೇಳಿದಾಗ ಆಗ ಸೆನ್ಸಾರ್ ಆದ ಕೃತಿಯ ಪ್ರಕಟಣೆಗೆ ನಾನು ಒಪ್ಪಿಕೊಂಡೆ. ನಂತ್ತರದಲ್ಲಿ ಲಂಡನ್‌ನ ರೇವನ್ ಪಾಸ್‌ನಿಂದ ಲಾಂಗ್‌ಮನ್ ಅಂತರ್‌ರಾಷ್ಟ್ರೀಯ ಮುದ್ರಣ ತೆಗೆದುಕೊಂಡು ಇಡೀ ಕೃತಿಯನ್ನು ಸಮಗ್ರವಾಗಿ ಪ್ರಕಟಿಸಿದರು. ಆ ಮುದ್ರಣ ಸೆನ್ಸಾರ್ ಮಂಡಳಿಯ ಗಮನ ಸೆಳೆದುದರಿಂದ ದ. ಆಫ್ರಿಕಾದಲ್ಲಿ ಆ ಪುಸ್ತಕದ ಎರಡೂ ಮುದ್ರಣಗಳನ್ನೂ ಬಹಿಷ್ಕೃತಗೊಳಿಸಲಾಯಿತು. ಅಂದಿನಿಂದ ನಾನು ಹೆಚ್ಚು ಮಾತನಾಡುವವಳಾಗಿದ್ದೇನೆ. ನಾನು 'ಆಮಂಡಲ' ಬರೆದಾಗ ರಾಜಕೀಯ ಬಿಸಿ ಇತ್ತು. ಈ ಪುಸ್ತಕ ಸೊವೇಟೋನಲ್ಲಿ 1976ರಲ್ಲಿ ನಡೆದ ದುರ್ಘಟನೆಗಳ ಕುರಿತುದಾಗಿತ್ತು. 'ಮ್ಯೂರಿಯಲ್' ಬಹಿಷ್ಕೃತಗೊಳ್ಳುವ ಮೊದಲು ಪ್ರಿಟೋರಿಯ, ಜ್ಯೊಯಮ್ ಫಾನ್‌ಟೇನ್ ಮತ್ತು ಇಂತಹ ಇತರೇ ಸ್ಥಳಗಳಿಂದ ಬಿಳಿಯ ಲಿಬರಲ್ಸ್ ಎಂದು ಕರೆಯಲ್ಪಡುವ ಜನರಿಂದ ನನಗೆ ಪತ್ರಗಳು ಬಂದವು. ಅವರು ಆಫ್ರಿಕಾನ್ಸ್‌ನಲ್ಲಿ ಬರೆದಿದ್ದರು : 'ಓಹ್ ಮಿರಿಯಂ, ನಾವು ನಿನ್ನ ಪುಸ್ತಕವನ್ನು ಓದಿದ್ದೇವೆ. ಆದರೆ ಸ್ಥಿತಿ ಅಷ್ಟೊಂದು ಕೆಟ್ಟನಾಗಿಲ್ಲ'. ಬಹುಶಃ ಅದು ಅವರ ಅಭಿಪ್ರಾಯ. ಅವರು ಸಂಗತಿಗಳನ್ನು ಬೇರೆಯಾಗಿಯೇ ನೋಡುತ್ತಾರೆ. ಆ ಪುಸ್ತಕದಲ್ಲಿ ನಾನು ಸಮತೋಲನದ ನಿಲುವನ್ನೇ ತೆಗೆದುಕೊಂಡಿದ್ದೇನೆಂದು ಭಾವಿಸಿದ್ದೇನೆ. 'ಆಮಂಡಲ' 'ಮ್ಯೂರಿಯಲ್'ಗಿಂತ ಹೆಚ್ಚು ರಾಜಕೀಯವಾಗಿರುವ ಪುಸ್ತಕ. ಪ್ರಕಾಶಕರು ಇದಕ್ಕೆ ಬೇರೆಯೇ ಶೀರ್ಷಿಕೆಯನ್ನಿಡಿಸಲು ಹಾಗೂ ಅನೇಕ ಬದಲಾವಣೆಗೆ ನನ್ನನ್ನು

ಒಪ್ಪಿಸಲು ಪ್ರಯತ್ನಿಸಿದರು. ನಾನು ತಿರಸ್ಕರಿಸಿದೆ. ಆ ಪುಸ್ತಕ ಬಹಿಷ್ಕೃತಗೊಳ್ಳಲು ಹೆಚ್ಚು ಸಮಯ ತೆಗೆದುಕೊಳ್ಳಲಿಲ್ಲ, ಆದರೆ ಮೊದಲ ಮುದ್ರಣದ 5000 ಪ್ರತಿಗಳು ಅಷ್ಟರಲ್ಲಿಯೇ ಮಾರಾಟವಾಗಿದ್ದವು. 'ಅಮಂಡಲ' ಎಂದರೆ ಅಧಿಕಾರ, ಹಾಗೂ ದ. ಆಫ್ರಿಕಾದಲ್ಲಿ 'ಅಮಂಡಲ ನಗ್'ವೆಟ' ಎನ್ನುವುದು ಘೋಷಣೆಯಾಗಿಬಿಟ್ಟಿದೆ. ಅದು ಪ್ರತಿರೋಧದ ಸಂಕೇತವಾಗಿಬಿಟ್ಟಿದೆ. ಸೆನ್ಸಾರ್ ಮಂಡಳಿಯ ಎಚ್ಚರಿಕೆಗೆ ಕೃತಿಯ ಶೀರ್ಷಿಕೆಯೇ ಸಾಕಾಗಿತ್ತು. ನಾನು ಅನೇಕ ಕತೆಗಳನ್ನೂ ಬರೆದಿದ್ದೇನೆ. ನನ್ನ ಈ ಕೃತಿಗಳಿಂದಾಗಿ ನಾನು ವಿದೇಶಕ್ಕೆ ಆಹ್ವಾನಿತಳಾಗಿದ್ದೇನೆ ಮತ್ತು ಈ ಪ್ರವಾಸಗಳಿಂದ ನಾನು ಹೆಚ್ಚು ಕಲಿತಿದ್ದೇನೆ. ದ. ಆಫ್ರಿಕಾದಲ್ಲಿ ನಾವು ಎಷ್ಟು ಏಕಾಂಗಿಗಳು (Isolates) ಆಗಿದ್ದೇವೆಂಬುದನ್ನು ನೀವು ಊಹಿಸಲೂ ಸಾಧ್ಯವಿಲ್ಲ. ಲೋವಾದಲ್ಲಿ ಪ್ರಪಂಚದ ಎಲ್ಲಾ ಭಾಗಗಳಿಂದ ಬಂದ ಬರಹಗಾರರ ಜೊತೆ ನಾನು ಅಂತರ್‌ರಾಷ್ಟ್ರೀಯ ಲೇಖಕರ ಶಿಬಿರದಲ್ಲಿ ಭಾಗವಹಿಸಿದ್ದೆ. ಒಂದು ಅದ್ಭುತವಾಗಿರುವ ಅನುಭವ ಅದು. ಇಂತಹ ಪರಿಚಯಗಳು ತುಂಬಾ ಅಗತ್ಯ, ಸ್ಫೂರ್ತಿದಾಯಕ ಕೂಡಾ. ಮರಳಿ ನನ್ನ ದೇಶದಲ್ಲಿ ನನ್ನ ಜನರೊಂದಿಗೆ ನನ್ನ ಅನುಭವಗಳನ್ನು ಹಂಚಿಗೊಳ್ಳಲು ಪ್ರಯತ್ನಿಸಿದ್ದೇನೆ. ನಾನು ಅವರಲ್ಲಿ ಒಬ್ಬಳು. ಎಲೈಟ್ ಹಾಗೂ ದುಡಿಯುವ ವರ್ಗದ ಸಾಹಿತ್ಯದಲ್ಲಿ ಯಾವುದೇ ಭಿನ್ನತೆ ಇಲ್ಲ. ಈಗ ಕರಿಯರ ಮಧ್ಯಮ ವರ್ಗವೊಂದನ್ನು ಸೃಷ್ಟಿಸಲು ಅವರು ಸರ್ವ ಪ್ರಯತ್ನ ನಡೆಸಿದರೂ ಅಧಿಕಾರಿವರ್ಗದವರ ಕಣ್ಣುಗಳಲ್ಲಿ ನಾವೆಲ್ಲರೂ ಕರಿಯರೆಂದೇ ತಿರಸ್ಕರಿಸಲ್ಪಟ್ಟಿದ್ದೇವೆ. ನಾನು ಸಾಧಿಸಿದ ಉನ್ನತ ಸಂಗತಿಯೆಂದರೆ ಹೊಸ ಜನಾಂಗದ ಮಹಿಳೆಯರಿಗೆ ಉದಾಹರಣೆಯಾಗಿರುವುದು. ನೀವು ನಿಮ್ಮದೇ ಕಾರ್ಯಶೀಲತೆ ತೊಡಗಿಸಿಕೊಂಡರೆ ಏನನ್ನಾದರೂ ಸಾಧಿಸುವುದು ಸಾಧ್ಯ. ಅಧಿಕಾರದ ವಿರುದ್ಧ ನಿಲ್ಲುವ ಮಹಿಳೆಯರನ್ನು ನಾನು ಯಾವಾಗಲೂ ಗೌರವಿಸುತ್ತೇನೆ. ಲಿಲಿಯನ್ ನೊಗೋಯಿ ಅಂತಹವರನ್ನು.

**ನೀವು ದಕ್ಷಿಣ ಆಫ್ರಿಕ ಬಿಡಬೇಕೆಂದು ಎಂದಾದರೂ ಎಣಿಸಿದ್ದೀರಾ ?**

ಎಲ್ಲಿಯವರೆಗೆ ನಾನು ನನ್ನ ದೇಶದಲ್ಲಿ ಬರೆಯುವುದು ಸಾಧ್ಯವಿದೆಯೋ ಅಲ್ಲಿಯವರೆಗೂ ನಾನು 'ಗಡೀಪಾರ'ನ್ನು ಯಾವತ್ತು ಆಯ್ಕೆ ಮಾಡುವುದಿಲ್ಲ. ದಕ್ಷಿಣ ಆಫ್ರಿಕ ಬಿಡುವುದು ಎಂದರೆ ನೀವು ನಿಮ್ಮ ಭೂಮಿಯನ್ನು ಬಿಟ್ಟ ಹಾಗೆ, ನಿಮ್ಮ ಬೇರುಗಳನ್ನು ಹರಿದುಕೊಂಡ ಹಾಗೆ. ಯಾವಾಗ ದುರ್ಘಟನೆಗಳು ಜರುಗುತ್ತವೆಯೋ ಆಗ ಇತರರೊಂದಿಗೆ ಅನುಭವಿಸುತ್ತೇನೆ. ನೀವು 'ಗಡೀಪಾರಿ' ನಲ್ಲಿ ಇದ್ದರೆ ನಿಮ್ಮ ಜನರೊಡನೆ ಬಂಧಗಳನ್ನು ಕಳಚಿಕೊಳ್ಳುತ್ತೀರಿ, ಮತ್ತು ನೀವು ಮರೆಯುವುದೂ ಸಾಧ್ಯ. ನಾನು ನನ್ನ ಜನರಿಗೆ ಸೇರಿದವಳಾಗಿದ್ದೇನೆ.

**ಸಾಹಿತ್ಯದಲ್ಲಿ ಮಹಿಳೆಯರು ಹೇಗೆ ಚಿತ್ರಿತರಾಗಿದ್ದಾರೆ ? ಈ ದೆಸೆಯಲ್ಲಿ ಲೇಖಕ/ಲೇಖಕಿಯರ ಬರಹಗಳಲ್ಲಿ ವ್ಯತ್ಯಾಸ ಇದೆಯೇ ?**

ಈ ಬಗ್ಗೆ ಹೇಳುವುದು ಅಸಾಧ್ಯ, ಏಕೆಂದರೆ ಮಹಿಳೆಯರ ಬರಹಗಳೇ ಕಡಿಮೆ. ಆರ್ಥಿಕ ಭಾಷೆಯ ಸಾಹಿತ್ಯವೂ ಕೂಡಾ ಗಂಡಸರಿಂದಲೇ ಬರೆಯಲ್ಪಟ್ಟಿದೆ. ಹೆಂಗಸರು ಮೃದು ಹೃದಯದವರು, ತಾಯಿತ್ವ ಹೊಂದಿದವರು, ಆಗೀಗ್ಗೆ ಸುಂದರಿಯರು ಎಂದು ಹೇಳಲಾಗುತ್ತದೆ. ನಗರ ನಾಟಕ ರಂಗದಲ್ಲಿ ತಾಯಿತ್ವ ಹಾಗೂ ಸ್ವತಂತ್ರ್ಯಳಾಗುವ, ಅವಳ ದಾರಿಯಲ್ಲಿಯೇ ಸಾಗುವ, ಅದೇ ಕಾರಣದಿಂದ ಅನುಮಾನಿಸಲ್ಪಡುವ ಎರಡು ಪಾತ್ರಗಳ ಮಧ್ಯದ ವೈಲಕ್ಷಣ್ಯಗಳಿಗೆ (contrast) ಒತ್ತು ನೀಡುವುದನ್ನು ನೀವು ಕಾಣುತ್ತೀರಿ. ಗಿಬ್‌ಸನ್ ಕೆಂಟೆಯ ನಾಟಕಗಳಲ್ಲಿಯಂತೆ. ಆ ತರಹೆಯ ಮಹಿಳೆಯರು ಅಪರೂಪ, ಅವರು ನಿತ್ಯ ಬದುಕಿನ ಪ್ಯಾಟ್ರನ್‌ಗೆ ಬೆನ್ನು ತಿರುಗಿಸಿರುತ್ತಾರೆ, ಅದರರ್ಥ ಅವರನ್ನು ಋಣಾತ್ಮಕವಾಗಿ ಚಿತ್ರಿಸಲಾಗಿದೆ.

ನನ್ನದೇ ಕೃತಿಗಳಲ್ಲಿ ಹೆಣ್ತನದ ವಿವಿಧ ಬಗೆಗಳನ್ನು ಅದರ ಎಲ್ಲಾ ಆಯಾಮಗಳಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಇವು ನನ್ನ ಅನುಭವ ಹಾಗೂ ಇತರ ಹೆಂಗಸರ ಜೊತೆಗಿನ ಸಂಬಂಧಗಳ ಮೂಲಕವಾಗಿ. ನಾನು ಹೆಂಗಸರನ್ನು ಆದರ್ಶೀಕರಿಸುವುದಿಲ್ಲ. ನನ್ನ ಕೃತಿಗಳಲ್ಲಿ 'ಸೂಪರ್ ವಿಮೆನ್'ಗಳಿಲ್ಲ. ನಾಯಕಿಯರು ಮನೆಯಲ್ಲಿನ ತಾಯಂದಿರ ಸಂಕೇತಗಳಿಗಿಂತ ಉನ್ನತ ಮಟ್ಟದವರು. ಪ್ರತಿರೋಧಗಳಲ್ಲಿರುವ ಹೆಂಗಸರಿಗೂ ಇದು ಅನ್ವಯಿಸುತ್ತದೆ. ತಾಯಿ ಹಾಗೂ ವಿಮೋಚನೆಗೊಂಡ ಹೆಣ್ಣಿನ

ಎರಡೂ ಇಮೇಜ್‌ಗಳನ್ನೂ ಇವರು ಪ್ರತಿನಿಧಿಸುತ್ತಾರೆ- ಲಿಲಿಯರ್ ನೊಗೋಯ್ ಪತ್ನಿ ಹಾಗೂ ತಾಯಿಯ ಪಾತ್ರದ ಬದುಕು ಬಿಟ್ಟು ಕೊಡಲಾರದೇ ಒಮ್ಮೆ ಚೈನಾದಲ್ಲಿ ಓದುವ ಆಹ್ವಾನವನ್ನೇ ತಿರಸ್ಕರಿಸಿದ್ದರು. ಈ ಅವಕಾಶವನ್ನು ಆಕೆ ತಿರಸ್ಕರಿಸಿದ್ದು ತನ್ನ ಜೀವನಕ್ಕೆ ಹೊಸ ಆಯಾಮ ಕೊಡುವುದಕ್ಕೆ. ತಾಯ್ತನ ಹಾಗೂ ಸಂಪ್ರದಾಯದ ಒತ್ತಡಗಳನ್ನು ನೆರವೇರಿಸುವುಕ್ಕೋಸ್ಕರ.

ನನ್ನ ಸ್ತ್ರೀ ಪಾತ್ರಗಳು ವಾಸ್ತವವಾಗಿ ಚಿತ್ರಿಸಲ್ಪಟ್ಟಿವೆ. 'ಅಮಂಡಲ'ದಲ್ಲಿ ಸ್ತ್ರೀಯರು ದುರ್ಬಲರಲ್ಲ, ಅಬಲೆಯರಲ್ಲ. ಅವರು ಮನೆಯಲ್ಲಿಯೇ ಕುಳಿತುಕೊಳ್ಳುವವರಲ್ಲ. ಗಂಡಸರು ಹೇಳುವುದರ ಬಗ್ಗೆ ಅವರು ಟೀಕಿಸುತ್ತಾರೆ, ಅವರು ಹೋರಾಟಗಾರ್ತಿಯರು. ಅವರುತಾಯಂದಿರು ಹಾಗೂ ಅವೇ ಸಮಯದಲ್ಲಿ ಕ್ರಾಂತಿಕಾರಿಗಳೂ ಕೂಡಾ. ಅವರು ಮಾತನಾಡುವುದು ಯಾವಾಗಲೂ ಪುರುಷರಿಂದ ಒಪ್ಪಿತವಾಗುವಂತಹುದಲ್ಲ. ಕ್ರಾಂತಿಕಾರಿ ಹಾಗೂ ತಾಯ್ತನದ ಪಾತ್ರಗಳನ್ನು ಒಟ್ಟಾಗಿ ಅಭಿವ್ಯಕ್ತಿಗೊಳಿಸುವ ಸಮಸ್ಯೆಗಳು ನಮ್ಮ ಸಮಾಜದ ಹೆಂಗಸರಿಗೆ ಸಂಪೂರ್ಣವಾಗಿ ಹೊಸದಾದ ಅನುಭವಗಳು. ರಾಜಕೀಯ ಕ್ರಾಂತಿಕಾರತ್ವದೊಂದಿಗೆ ಬಟ್ಟೆಗಳ ಇಸ್ತ್ರಿ ಮಾಡುವುದು, ಕಾಲು ಚೀಲ ಒಗೆಯುವುದರ ಅರ್ಥವೇನೆಂಬುದು ನಮಗೆ ಗೊತ್ತು. ಇದನ್ನು ಯಾವಾಗಲೂ ನಾವು ಮಾಡಿದ್ದೇವೆ.

**ನೀವು ನಿಮ್ಮ ಕೃತಿಗಳಲ್ಲಿ ಕಟ್ಟಳೆ/ಸಂಪ್ರದಾಯ ವಿರೋಧಿಸಿರುವಿರೇ? ಅವುಗಳ ಪ್ರತಿಕ್ರಿಯೆ ಏನು?**

ಕರಿಯ ಹೆಂಗಸರಿಗೆ ನಿಜವಾದ ಟ್ಯಾಬೂ ಎಂದರೆ ಬಿಳಿಯ ಗಂಡಸರೊಡನೆ ಒಪ್ಪಂದದ ಸ್ಥಿತಿಯಲ್ಲಿ ಕಾಣಿಸಿಕೊಳ್ಳುವಂತಹದು. ಇದರ ಬಗ್ಗೆ ಬರೆಯುವುದಿರಲಿ, ನೀವು ಮಾತನಾಡುವುದಿಲ್ಲ ಕೂಡಾ. ಮೊದಲ ಬೋಯರ್ ಜಾನ್ ವ್ಯಾನ್ ರೈ ಬೀಕ್ ಕೇಪ್‌ನಲ್ಲಿ ಬಂದಿಳಿದ ನಂತರದ ಒಂಭತ್ತು ತಿಂಗಳಲ್ಲಿ ಒಂದು ಕಲರ್ ಮಗು ಜನಿಸಿದ ಘಳಿಗೆಯಿಂದಲೂ ಇದು ನಿತ್ಯ ನಡೆಯುತ್ತಿದೆ. ನಮ್ಮ ಕುಟುಂಬದ ಹಲವಾರು ಹೆಂಗಸರು ಬಿಳಿಯ ಮಕ್ಕಳನ್ನೂ ತಮ್ಮ ಬೆನ್ನ ಮೇಲೆ ಹೊತ್ತಿರುತ್ತಾರೆ. ನಾವು ಅದರ ಬಗ್ಗೆ ಮಾತನಾಡಲೂ ತಿರಸ್ಕರಿಸುತ್ತೇವೆ. ಇದು ನನ್ನ ಕತೆ 'ಜಸ್ಟ್ ದಿ ಟು'ನ ವಸ್ತು. ಈ ಕತೆ ದಕ್ಷಿಣ ಆಫ್ರಿಕಾದಲ್ಲಿ ಬಹಿಷ್ಕೃತವಾಗಿದೆ. ಈ ಕತೆಯನ್ನು ನಾನು ಲೋವಾದಲ್ಲಿ ಓದಿದೆ. ಕ್ಯಾಮರೂನ್, ಘಾನಾ, ಬೋಟ್ಸ್‌ವಾನಾದಿಂದ ಬಂದಿದ್ದ ಮೂವರು ಲೇಖಕರು ಇದನ್ನು ಗಟ್ಟಿಯಾಗಿ ವಿರೋಧಿಸಿದರು. ಈ ಕತೆ ಒಬ್ಬ ರೈಲು ನಿರ್ವಾಹಕನ ಬಗ್ಗೆ, ಆತ ರೈಲಿನುದ್ದಕ್ಕೂ ಕರಿಯ ಹುಡುಗಿಯನ್ನು ಅಟ್ಟಿಸಿಕೊಂಡು ಬರುತ್ತಾನೆ. ಅವರಿಬ್ಬರೂ ಒಂದು ಭೋಗಿಯಲ್ಲಿ ಸಂಧಿಸುತ್ತಾರೆ. ಅಲ್ಲಿ ನಡೆಯುವುದನ್ನೇ ಈ ಮೂವರೂ ಲೇಖಕರೂ ವಿರೋಧಿಸಿದ್ದು. ನಿರ್ವಾಹಕ ತನ್ನ ಪಾಡಿಗೆ ತಾನಿರದಿದ್ದರೆ ಆ ಕರಿಯ ಹುಡುಗಿ ಆತನನ್ನು ಕೊಂದುಬಿಡಬಿಡಬೇಕಿತ್ತು ಎಂಬುದು ಅವರ ಅಭಿಪ್ರಾಯ. ಜನ ಹೀಗೆಯೇ ಸ್ಪಂದಿಸುತ್ತಾರೆ. 'ನಮ್ಮವರೊಬ್ಬರನ್ನು'- ಬಲಾತ್ಕರಿಸುದುದು, ಅತಿಕ್ರಮ ಪ್ರವೇಶ ಮಾಡಿದುದು ಅವರಿಗೆ ನೋವಾಗುತ್ತದೆ ಹಾಗೂ ಹೆದರಿಕೆಯಾಗುತ್ತದೆ.

**ಕರಿಯ ಮನುಷ್ಯನೊಬ್ಬ 'ನಮ್ಮ ಬಿಳಿಯ' ಹೆಂಗಸಿನೋರ್ವಳೊಡನೆ ಓಡಿ ಹೋಗಿ ಬಿಡುತ್ತಾನೆ ಎಂಬ ಹೆದರಿಕೆಯ ಭಾವನೆ ಪಾಶ್ಚಿಮಾತ್ಯ ಗಂಡಸರಲ್ಲೂ ಇದೆಯೆಂದು ನನಗೆನಿಸುತ್ತದೆ**

ಹೌದು, ಅದೂ ಈ ರೀತಿಯದೇ. ಸ್ತ್ರೀಯರು ಯಾವಾಗಲೂ 'ಆಸ್ತಿ'ಯೆಂದೇ ಪರಿಗಣಿಸಲ್ಪಟ್ಟಿದ್ದಾರೆ. ನಮ್ಮಗಳ ವಿಚಾರದಲ್ಲಿ ಜೊತೆಗೆ ರಾಜಕೀಯ ಆಯಾಮ ಸೇರಿಕೊಂಡಿದೆ- ಬೋಟ್ಸವಾನಾದ ಲೇಖಕ ಹೇಳಿದ: "ಪ್ರತಿ ನಿತ್ಯ ಬೋಯರ್ಸ್ ಗಡಿ ದಾಟಿ ಬಂದು ನಮ್ಮ ಹುಡುಗಿಯರ ಹೊಂದಿಸಿಕೊಳ್ಳುವುದನ್ನು ನಾನು ಕಾಣುತ್ತೇನೆ. ಪ್ರತಿ ತಿಂಗಳು ಹೆಚ್ಚು ಕಲರ್ ಮಕ್ಕಳು ಹುಟ್ಟುತ್ತವೆ. ಆದರೆ ಮಿಲಿಯಂ ನಮ್ಮೆಲ್ಲಾರಿಗೂ ಅದು ಕತೆಯ ವಸ್ತುವಾಗಬಾರದು." ಯಾಕಾಗಬಾರದೆಂದು ನಾನು ಆಶ್ಚರ್ಯ ಪಡುತ್ತೇನೆ. ಬಿಳಿಯ ಗಂಡಸರೊಂದಿಗಿನ ತಮ್ಮ ಸಂಬಂಧಗಳನ್ನು ನನ್ನೊಂದಿಗೆ ಹೇಳುವ ಹುಡುಗಿಯರನ್ನು ರೈಲಿನಲ್ಲಿ ನಾನು ಆಗಾಗ್ಗೆ ಭೇಟಿಯಾಗುತ್ತೇನೆ. ಬಹು ಮಂದಿ ಅಪರಿಚಿತರು ತಮ್ಮ ಬದುಕಿನ ಬಗ್ಗೆ ನನ್ನಲ್ಲಿ ಹೇಳುತ್ತಾರೆ, ಅವರ ಅನುಭವಗಳನ್ನು ನನ್ನೊಂದಿಗೆ ಹಂಚಿಕೊಳ್ಳುತ್ತಾರೆ. ಬಹಳಸಲ ಈ ಅನುಭವಗಳನ್ನು ನಾನು ಕೃತಿಯಲ್ಲಿ ಬಳಸುತ್ತೇನೆ- ಹಿಂದಿನ ಅಧಿವೇಶನದಲ್ಲಿ ಆ ಮೂರು ಲೇಖಕರಲ್ಲಿ

ಒಬ್ಬರು ರಷ್ಯನ್ ಹುಡುಗಿ ತನ್ನೆದುರು ನಿಂತುದರ ಬಗ್ಗೆ ಓದಿದ ಕವನದ ಬಗ್ಗೆ ವ್ಯಂಗವಾಗಿ ಯೋಚಿಸದೇ ವಿಧಿಯಿಲ್ಲ. ಸ್ಪಷ್ಟವಾಗಿರುವುದೆಂದರೆ ಕರಿಯ ಮನುಷ್ಯ ಬಿಳಿಯ ಹೆಂಗಸಿನೊಡನೆ ಹೊಂದಿದ ಸಂಬಂಧದ ಬಗ್ಗೆ ಮಾತನಾಡುವುದರಲ್ಲಿ ಯಾವ ತಪ್ಪೂ ಇಲ್ಲ. !

ಶೀಲದ ಬಗ್ಗೆಯೂ ಹೀಗೆಯೇ ಹೇಳಬಹುದು. ಇದು ಇನ್ನೊಂದು ಕಟ್ಟಳೆ. ವಿವಾಹದ ಮುನ್ನ ಮಹಿಳೆಯೇ ಇತರೇ ಪುರುಷರೊಡನೆ ಸಂಬಂಧ ಹೊಂದಿದ್ದರೆ ಅವಳು ಅದರ ಬಗ್ಗೆ ಮಾತನಾಡಲೇ ಕೂಡದು. ಪುರುಷರ ವಿಚಾರದಲ್ಲಿ ಇದು ವ್ಯತಿರಿಕ್ತ. ಅವರು ಹೆಂಗಸರೊಡಗಿನ ತಮ್ಮ ಸಂಬಂಧಗಳ ಬಗ್ಗೆ ಹೆಮ್ಮೆ ಪಡುತ್ತಾರೆ, ಸ್ವೇಚ್ಛೆಯಿಂದ ಇದರ ಬಗ್ಗೆ ಮಾತನಾಡುತ್ತಾರೆ. ಅವರು ಹೀಗೆ ಹೇಳುತ್ತಾರೆ." ನಾನು ಇಂತವಳ ಜೊತೆ ಹೊರಗೆ ಹೋಗಿದ್ದೆ, ಅವಳಲ್ಲಿ ಏನಿದೆ ವಿಶೇಷ': ಗಂಡಸೋರ್ವ ಇದರ ಬಗ್ಗೆ ಬಡಾಯಿ ಕೊಚ್ಚಿಕೊಳ್ಳುತ್ತಾನೆ, ಆದರೆ ತನ್ನ ಹೆಂಡತಿ ಹೀಗೆ ಮಾಡಲು ಬಿಡುವುದಿಲ್ಲ.

**ಸ್ತ್ರೀವಾದದ ಬಗ್ಗೆ ದ. ಆಫ್ರಿಕಾದ ಜನರ ಅಭಿಪ್ರಾಯ ಹೇಗೆ ?**

ನಿಮಗೆ ಗೊತ್ತಿರುವ ಹಾಗೆ ಈ ಕ್ಷಣದವರೆಗೂ ಸ್ತ್ರೀವಾದದ ಬಗ್ಗೆ ಬರೆಯುವ ಸಾಹಸಕ್ಕೆ ಕೈ ಹಾಕಿದ ಕರಿಯ ಹೆಂಗಸು ನಾನೊಬ್ಬಳೇ. ಇಲ್ಲಿ ಸಮಾನತೆ ಇಲ್ಲ. ನೀವೇನಾದರೂ ಮಾಡಿದರೆ ಸಾಮಾನ್ಯ ಗಂಡಸರು 'fellow man' ಎಂಬ ರೀತಿಯಲ್ಲಿ ನೋಡಲಿಚ್ಛಿಸುತ್ತಾರೆ. ಸ್ತ್ರೀಯಾಗಿ ನೀವೇನೋ ಮಹತ್ವವಾದುದನ್ನು ಸಾಧಿಸಿದ್ದೀರೆಂದು ಅವರು ಒಪ್ಪಿಕೊಳ್ಳುವುದಿಲ್ಲ. ಇದು ಅವರಲ್ಲಿ ಭಯವನ್ನು ಹುಟ್ಟುಹಾಕುತ್ತದೆ. ದ. ಆಫ್ರಿಕಾ ಹಿಂದೆಗಿಂತ ಬಿಳಿಯ ಹೆಂಗಸರಿಗೆ ಇಂದು ಹೆಚ್ಚು ಹಕ್ಕುಗಳು ದೊರಕಿವೆ. ಅವರ ಕಾನೂನು ಬದ್ಧ ಸ್ಥಾನಮಾನಗಳು ಅಭಿವೃದ್ಧಿಗೊಂಡಿವೆ. ಎಲ್ಲಿಯವರೆಗೆ ಎಂದರೆ ರೆಫ್ರಿಜರೇಟರ್, ಫರ್ನಿಚರ್, ಕಾರು ಖರೀದಿಗೆ ಅಥವಾ ಯಾವುದೇ ಒಪ್ಪಂದಕ್ಕೆ ಗಂಡಂದಿರು ಸಹಿ ಮಾಡುವ ಅಗತ್ಯವೇ ಇಲ್ಲ. ಆದರೆ ನಮಗೆ ಪರಿಸ್ಥಿತಿ ಹಾಗೆಯೇ ಇದೆ. ನನ್ನ ಪ್ರಕಾಶಕರೊಡನೆ ನನ್ನ ಒಪ್ಪಂದಕ್ಕೆ ಸಹಿ ಹಾಕುವುದಕ್ಕೆ ನನಗೆ ಅವಕಾಶ ನೀಡಲಿಲ್ಲ. ಆದು ನನ್ನ ಪುಸ್ತಕವಾಗಿದ್ದಾಗ್ಯೂ ಕೂಡಾ ನನ್ನ ಗಂಡ ಆದಕ್ಕೆ ಸಹಿ ಹಾಕಬೇಕಾಯಿತು. ಕರಿಯ ಹಾಗೂ ಬಿಳಿಯ ಹೆಂಗಸರೀರ್ವರೂ ಬಿಳಿಯ ಗಂಡಸರ ಶೋಷಣೆಯ ವಿರುದ್ಧ ಹೋರಾಡುವುದು ನಿಜವಾದರೂ ನಮ್ಮ ನಡುವೆ ನಿಜವಾದ ಒಗ್ಗಟ್ಟಿಲ್ಲ. ಏಕೆಂದರೆ ನಾವು ವಿಭಿನ್ನ ಬಗೆಗಳಿಂದ ಹೋರಾಟ ನಡೆಸುತ್ತಿದ್ದೇವೆ. ದಕ್ಷಿಣ ಆಫ್ರಿಕಾದಲ್ಲಿ 'ಅಪಾರಥೈಡ್' ನಿಜವಾದ ಸಹೋದರಿಯತ್ವದ ದಾರಿಗೆ ಅಡ್ಡನಾಗಿ ನಿಲ್ಲುತ್ತದೆ. ಈ ಪ್ರಶ್ನೆಯ ಕುರಿತು ಅಭ್ಯಸಿಸಲು ಬಂದ ಇಂಗ್ಲಿಷ್ ಪತ್ರಿಕೋದ್ಯಮಿಯೊಬ್ಬಳು ತಲುಪಿದ ಅಂತಿಮ ತೀರ್ಮಾನವೇ ಇದು. ಯಾಕೆ ಅವರು ದುಸ್ಥಿತಿಯಲ್ಲಿರುವ ಕರಿಯ ಸಹೋದರಿಯರ ಸ್ಥಿತಿಯನ್ನು ಉತ್ತಮ ಪಡಿಸಲು ಅವರೊಟ್ಟಿಗೇ, ಹೋರಾಡಲಾರರು ಎಂದು ಆಕೆ ಬಿಳಿಯ ಹಿಂಗಸರಿಗೆ ಕೇಳಿದಳು. ಉತ್ತರ ಹೀಗಿತ್ತು, "ಆ ತರಹೆಯ ಸಂಗತಿಗೆ ಅಧಿಕಾರಿ ವರ್ಗದವರನ್ನು ಎದುರು ಹಾಕಿಕೊಳ್ಳುವುದು ನಮ್ಮ ಗಂಡಸರಿಗೆ ಇಷ್ಟವಾಗುವುದಿಲ್ಲ". ಅಂದರೆ ಅವರ ಹೆಂಗಸರು ಯಾವ ಚಟುವಟಿಕೆಗಳಲ್ಲಿ ಭಾಗವಹಿಸಬೇಕು ಎಂಬುದನ್ನು ಕೊನೆಗೆ ಬಿಳಿಯ ಗಂಡಸರೇ ನಿರ್ಧರಿಸುತ್ತಾರೆ. ನಮ್ಮದೇ ಮಹಿಳಾ ಸಂಘಗಳನ್ನು ಸ್ಥಾಪಿಸಲು ನಾವು ಪ್ರಯತ್ನಿಸಿದ್ದೇವೆ. ಅದೊಂದು ಕಷ್ಟಕರ ಹೋರಾಟ. ನೀರಿನ ಮಟ್ಟದ ಮೇಲೆ ತಲೆ ಇಡಬೇಕು ಎನ್ನುವ ನಿಮ್ಮ ಪ್ರಯತ್ನವೇ ನಿಮ್ಮ ಸಮಯವೆಲ್ಲವನ್ನೂ ತೆಗೆದುಕೊಂಡುಬಿಡುತ್ತದೆ.

ಕರಿಯ ಗಂಡಸರು ತಮ್ಮ ಹೆಂಗಸರಿಗೆ ಪ್ರೋತ್ಸಾಹ ನೀಡುವುದಿಲ್ಲ. ತಮಗೆ ಗೊತ್ತಿರದ ಸಂಗತಿಗಳನ್ನು ತಮ್ಮ ಹೆಂಡತಿಯರು ಓದುವುದನ್ನೂ ಬಹುಮಂದಿ ಗಂಡಸರು ಇಷ್ಟಪಡಲಾರರು.

**ಈ ರೀತಿಯ ಎಲ್ಲಾ ಕೊಡಕುಗಳನ್ನೂ ಮೀರಬೇಕೆಂದರೆ, ಎಲ್ಲಕ್ಕೂ ಹೊರತಾಗಿ ಓದುವುದು ಮತ್ತು ಬರೆಯುವುದನ್ನು ಮುಂದುವರಿಸಬೇಕೆಂದರೆ ಮಹಿಳೆಯರು ಬಹಳ ಗಟ್ಟಿಗಿತ್ತಿಯರಾಗಿರಬೇಕೆಂಬುದನ್ನು ನಾನು ಕಂಡಿದ್ದೇನೆ. ನಿಮ್ಮ ಗುಟ್ಟೇನು ?**

ನನ್ನ ತಾಯಿ ಯಾವಾಗಲೂ ನನ್ನನ್ನು ಪ್ರೋತ್ಸಾಹಿಸಿದ್ದಳು. ಶಿಕ್ಷಕರಾಗಿದ್ದ ನನ್ನ ತಂದೆ ಚಿಕ್ಕ ವಯಸ್ಸಿನಲ್ಲಿಯೇ ಮೃತರಾದರು. ನಮಗಾಗಿ ಅವರು ಪುಸ್ತಕ

ಗಳನ್ನು ಬಿಟ್ಟುಹೋಗಿದ್ದರು. ಶಾಲೆಯಲ್ಲಿದ್ದಾಗ ಪ್ರಬಂಧ ಬರೆಯುವುದನ್ನು ನಾನು ಸಂತೋಷಿಸುತ್ತಿದ್ದೆ. ಅವು ಚೆನ್ನಾಗಿದ್ದವು ಎಂಬ ಅಭಿಪ್ರಾಯವಿತ್ತು. ಆದಾಗ್ಯೂ ಆ ಸಂದರ್ಭದಲ್ಲಿ ನಾನು ಲೇಖಕಿಯಾಗುವ ಸಾಧ್ಯತೆಯ ಬಗ್ಗೆ ಯೋಚಿಸಿಯೇ ಇರಲಿಲ್ಲ. ವಿಚ್‌ವಾಟರ್ಸ್‌ರ್ಯಾಂಡ್ ವಿಶ್ವವಿದ್ಯಾನಿಲಯದಲ್ಲಿ ಕಳೆದ ಎರಡು ವರ್ಷ ಬಹಳ ವಿಭಿನ್ನತೆಯನ್ನೇ ಹುಟ್ಟು ಹಾಕಿತು. ನಮ್ಮೊಳಗೇ ಯೋಚಿಸುವುದನ್ನು ವಿಮರ್ಶಾತ್ಮಕವಾಗಿರುವುದನ್ನು, ನಾವು ಓದಿರುವುದನ್ನು ಪ್ರಶ್ನಿಸುವುದನ್ನು ಪ್ರೋತ್ಸಾಹಿಸು ವಂತಹ ಒಳ್ಳೆಯ ಶಿಕ್ಷಕರಿದ್ದರು. ನಾನು ನಿಮಗೆ ಹೇಳಿದ ಹಾಗೆ ನಾನು ಸ್ವಲ್ಪ ವಯಸ್ಸಾಗುವವರೆಗೂ ಬರೆಯುವುದನ್ನು ಪ್ರಾರಂಭಿಸಿರಲಿಲ್ಲ. ಇಲ್ಲಿಯವರೆಗಿನ ಕೃತಿಯ ಬಗ್ಗೆಗಿನ ವಿಮರ್ಶೆಗಳು ಉತ್ತೇಜನಕಾರಿ ಯಾಗಿವೆ. ಬಹುಶಃ ನಾನು ಅದೃಷ್ಟವಂತಳಾಗಿರಬೇಕು. ನಾನು ಗಟ್ಟಿ ಇಚ್ಛಾಶಕ್ತಿ ಉಳ್ಳವಳೋ ಎಂಬುದು ನನಗೆ ಗೊತ್ತಿಲ್ಲ. ಬರೆಯುವುದು ಮಹತ್ವವಾದದ್ದು, ಮತ್ತು ಬದಲಾವಣೆಗಳನ್ನು ತರುವಲ್ಲಿ ಇದು ಸಹಾಯಿಸುತ್ತದೆ ಎಂಬುದನ್ನು ನಾನು ನಂಬುತ್ತೇನೆ. ಇದು ಚರಿತ್ರೆಯಲ್ಲಿ ದೃಢಪಟ್ಟಿದೆ. ಇಲ್ಲದಿದ್ದರೆ ಪ್ರಪಂಚದಲ್ಲಿ ಯಾಕೆ ಅಷ್ಟೊಂದು ಸೆನ್ಸಾರ್‌ಷಿಪ್ ಇರುತ್ತಿತ್ತು ? ಅಧಿಕಾರಿ ಗಳು ಯಾಕೆ ಪುಸ್ತಕಗಳ ಬಗ್ಗೆ ಹೆದರುತ್ತಾರೆ ? ಅವರು ಜ್ಞಾನವನ್ನು ಅಪಾಯ ಎಂದು ಎಣಿಸುತ್ತಾರೆ. ತಮ್ಮ ದೇಶದಲ್ಲಿ ಅಥವಾ ಇತರ ಕಡೆಗಳಲ್ಲಿ ಏನು ನಡೆಯುತ್ತಿದೆ ಎಂದು ಗೊತ್ತಿರದ ಜನ ತಮ್ಮ ಸುತ್ತ ಇರುವುದನ್ನು ಅವರು ಅಪೇಕ್ಷಿಸುತ್ತಾರೆ. ನಾವು ಅಜ್ಞಾನವನ್ನು ಹೋರಾಡಬೇಕಾಗುತ್ತದೆ ಮತ್ತು ತಡೆಗಟ್ಟಬೇಕಾಗುತ್ತದೆ. ದ. ಆಫ್ರಿಕಾದಲ್ಲಿ ಕರಿಯರಿಗೆ ಶಿಕ್ಷಣದ ಅವಕಾಶಗಳು ಕಡಿಮೆ. ಎಣಿಸಲಾರದಷ್ಟು ಪುಸ್ತಕಗಳು ನಮಗೆ ತಿರಸ್ಕರಿಸಲ್ಪಟ್ಟಿವೆ. ಇವೆಲ್ಲದರ ಹೊರತಾಗಿ ನಾವು ಓದುತ್ತಲೇ ಇರಬೇಕಾಗುತ್ತದೆ. ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೆ ಬರೆಯುವುದು ನನ್ನ ಕೆಲಸ ಎಂದು ನಾನು ಎಣಿಸುತ್ತೇನೆ.

**ಪ್ರಪಂಚದ ಹೆಂಗಸರ ಕುರಿತು ನೀವು ಮಾತ ನಾಡುವುದಾದರೆ, ನೀವು ಅವರಿಗೆ ಏನು ಹೇಳು ತ್ತೀರಿ ?**

ನಾನು ಹೇಳುವುದು : ಒಗ್ಗಟ್ಟಿಗಾಗಿ ಶ್ರಮಿಸಿ, ನಿಮ್ಮ ಸುತ್ತಲೂ ಇರುವ ಬೇಲಿಗಳನ್ನು ಕೆಡವಲು ವೇದಿಕೆ ರಚಿಸಿಕೊಳ್ಳಿ. ನೀವು ಮತ್ತು ಇತರರು ಶಿಕ್ಷಣ ಹೊಂದಿ ಈ ಮೂಲಕ ಹೆಂಗಸರು ತಮ್ಮದೇ ಧ್ವನಿ ಕಂಡುಕೊಳ್ಳ ಬಹುದು ಮತ್ತು ಇತರರಿಗೆ ಅದು ಕೇಳಿಸುವಂತೆ ಮಾಡ ಬಹುದು. ಯಾವಾಗ ಎಲ್ಲರೂ ದುಡಿಯುವುದಕ್ಕೆ ಮತ್ತು ಅವಳ/ಅವನ ಪ್ರತಿಭೆಗಳನ್ನು ಅಭಿವೃದ್ಧಿಗೊಳಿಸಿ ಕೊಳ್ಳುವುದಕ್ಕೆ ಅವಕಾಶ ಹೊಂದುತ್ತಾರೋ ಆಗಷ್ಟೇ ಬಾಳು ಬದುಕಲು ಯೋಗ್ಯವಾಗಿರುತ್ತದೆ.

●

---

# ನಾನು ಮತ್ತು ನಿಧಿ

ನನ್ನೊಳಗೊಂದು ಹುತ್ತ,
ಒಳಗೆ ತಳುಕು ಹಾಕುವ ಆರು ಹೆಡೆ ನಾಗರ
ನೋಡಬೇಕಿತ್ತು,
ಮೆಲ್ಲನೆ ತೆರೆಸರಿಸಿ ಒಳ ಸರಿದ ಇದರ ಪರಿ
ಒಳಹೊಕ್ಕದ್ದು ಸುಮ್ಮನಿರಲಿಲ್ಲ.
ಸದ್ದಿರದೆ ಹೆಜ್ಜೆ ಮೂಡಿಸದೆ ಇಂಚು ಇಂಚು ಪರಿವೀಕ್ಷಣೆ !
ಯಕ್ಷ ನಕ್ಷೆಯೊಳಗೆ ಕಳೆದು ಹೋಗುವ ತವಕ
ನಾಗಮಣಿ ಬೆಳಕಲ್ಲಿ ನಡುವೆ ಹಾದಿಯಲಿ
ಹೆಜ್ಜೆ ಇರದ ನಾಗರ ಸರಿದಂಥ ಗುರುತು,
ಕತ್ತಲು ಬೆಳಕಿನಲಿ ಹಾವು ಏಣಿಯಾಟ ?
ನನ್ನೊಳಗಿನ ಹುತ್ತವಿದೆಯಲ್ಲ ಇದು
ಕಣಕಣ ಮಣ್ಣು ಸೇರಿದ ಗುಪ್ತ ನಿಧಿ
ಅದರೊಳಗೆ ಅಡಗಿಕೊಂಡಿದೆ
ಗೋವಲನ ಮಗನ ಕಗ್ಗಂಟು ಲಿಪಿ !?

○ ರಾಧಾ ಕಿನ್ನಾಳ

# ಸ್ಮಿತಾ ಜೆ.ಯವರ 'ನೆರಳು' ಕವನ ಸಂಕಲನ - ಒಂದು ಅನಿಸಿಕೆ

○ ಶೈಲಜಾ ಕೆ. ಟಿ.

ಪ್ರತಿಯೊಬ್ಬ ಹೆಣ್ಣಿನ ತಾರುಣ್ಯ ಪ್ರೀತಿಗಾಗಿ ಕಾತರಿಸುವ, ಒಲುಮೆಗಾಗಿ ಹಂಬಲಿಸುವ ಒಂದು ಸುಂದರವಾದ ಅಷ್ಟೇ ನಾಜೂಕಾದ ಘಟ್ಟ, ಹೂವಿನಂತಹ ಆಕೆಯ ಮನಸ್ಸು ನೂರಾರು ಹೊಂಗನಸುಗಳ ಪರಿಮಳ ತುಂಬಿಕೊಂಡು ನಳನಳಿಸುವ ಸಂಭ್ರಮದಲ್ಲಿ ಕಠೋರ ವಾಸ್ತವ ಆಕೆಯ ಅರಿವಿಗೆ ಬರುವುದಿಲ್ಲ. ಇಂತಹ ಕಾಲದಲ್ಲಿ ತನ್ನ ಅಂದ ಚೆಂದವನ್ನು ಹೊಗಳಿ ಮಧುವಾದ ಭಾವನೆಗಳನ್ನು ಕೆರಳಿಸಿ ಅವುಗಳಿಗೆ ಜೀವ ತುಂಬುತ್ತೇನೆನ್ನುವ ಯಾವುದೇ ಗಂಡು ಆಕೆಯನ್ನು ಸೆಳೆಯುತ್ತಾನೆ. ಆಕೆಯನ್ನು ಕಾಡಿಸಿ ರಮಿಸಿ ಆಕೆಯ ಮನದಾಳದಲ್ಲಿ ಬೇರುಬಿಡುತ್ತಾನೆ ಅಷ್ಟೆ ! ನಂತರ ಆಕೆ ಅವನಿಗಾಗಿ ವಾಸ್ತವವನ್ನು ಎದುರಿಸಲು ತಯಾರಾಗುತ್ತಾಳೆ. ಆದರೆ ಆತ ಅಪ್ಪ, ಅಮ್ಮ, ಜಾತಿ-ನೀತಿ ಎಂಬಿತ್ಯಾದಿ ಕಟ್ಟುಪಾಡುಗಳನ್ನು ಮುಂದೊಡ್ಡಿ ಸಭ್ಯಸ್ಥನಂತೆ ಗೂಡು ಸೇರಿಬಿಡುತ್ತಾನೆ. ಆಕಾಶದೆತ್ತಕ್ಕೇರಿಸಿ ದುತ್ತನೆ ನೆಲಕ್ಕಪ್ಪಳಿಸಲ್ಪಟ್ಟು ಮುಳ್ಳುಗಳ ಮಧ್ಯ ಸಿಕ್ಕಿಹಾಕಿಕೊಂಡ ಆಕೆಯ ಕೋಮಲ ಪ್ರೀತಿಯ ಪರಿವೆ ಅವನಿಗೆಲ್ಲಿ ? ಅಘಾತಕ್ಕೊಳಗಾದ ಮನಸ್ಸು ಹತಾಶೆ, ಅವಮಾನ ವಂಚನೆಗಳಡಿ ಸಿಲುಕಿ ನಲುಗಿ ಹೋಗುತ್ತದೆ. ನೋವಿನ ಬಾಧೆಯನ್ನು ತಾಳಲಾರದೆ ಆಕೆ ತನ್ನ ಬದುಕಿಗೆ ಪೂರ್ಣವಿರಾಮ ಹಾಕುವ ಹಂತಕ್ಕೆ ಬರುತ್ತಾಳೆ. ಇಂತಹ ತೀವ್ರ ಹತಾಶೆಗೆ ಗುರಿಯಾದ ಸ್ಮಿತಾ ಜ. ಯವರು ತನ್ನ ಎದೆಯ ಭಾವನೆಗಳೆಲ್ಲ ಹತ್ತಿ ಉರಿಯುತ್ತಿರುವಾಗ ಸಾಂತ್ವನಕ್ಕಾಗಿ ತಡಕಾಡುತ್ತಿದ್ದಾಗ ತನ್ನ ಕಿವಿಗೆ ಬಿದ್ದ ಗಾನ ಗಂಧರ್ವ ಮಲ್ಲಿಕಾರ್ಜುನ ಮನ್ಸೂರರ ಸಂಗೀತದ ಮಾಧುರ್ಯಕ್ಕೆ ಓಗೊಟ್ಟು ಅಂತರಾಳದ ನೋವನ್ನು ಹನಿಹನಿಯಾಗಿ ಸುಂದರ ತೋಡಿರಾಗದಲ್ಲಿ ಹೊಮ್ಮಿಸಿ ಬದುಕಿಗೆ ಅರ್ಥ ಕಂಡುಕೊಂಡ ಫಲವಾಗಿ ಹೊರಹೊಮ್ಮಿದ ಕವನ ಸಂಕಲನವೇ 'ನೆರಳು'.

ಪುಸ್ತಕದ ಪ್ರಾರಂಭದಲ್ಲಿ ಶ್ಯಾಮಸುಂದರ ಬಿದರಕುಂದಿಯವರೆಂದಂತೆ "—ಮನಸಿನಾಚೆ ಈಗ ಇಲ್ಲವಾದ, ಒಲಿದ ಗೆಳೆಯನೋ ಸಂಧಿಸಿದ ನಲ್ಲನೋ ಇದ್ದಾಗ ಅವನ ನೆನಪಿನ ಬಿಂಬವಾಗಿ ನರಳು— ....ಇಂತಹ ನರಳುವಿಕೆ........ಮನಸಿನ ದಾಹದಲ್ಲಿ ಅದ್ದಿ ಬಂದ ಹೊಸ ಅರಿವಿನ ಪದಪೋಣಿಕೆ" ಎಂಬ ಮಾತು 'ನೆರಳು' ಕವನ ಸಂಕಲನಕ್ಕೆ ಅತ್ಯಂತ ಸೂಕ್ತ.

ಈ ಹನಿಗವನಗಳಲ್ಲಿ ಸ್ಮಿತಾರವರು ವಾಸ್ತವ ಮತ್ತು ನೆನಪುಗಳನ್ನು ಸೂಕ್ಷ್ಮವಾಗಿ ಮನತಟ್ಟುವಂತೆ ಹಿಡಿದಿದ್ದಾರೆ. ಅವರ ಭಾಷೆಯ ಮೇಲಿನ ಹಿಡಿತ, ಭಾವನೆಗಳ ಅಭಿವ್ಯಕ್ತಿಯಲ್ಲಿನ ದಿಟ್ಟತನ, ಪ್ರಾಮಾಣಿಕತೆ ಮೆಚ್ಚಿಗೆಯಾಗುತ್ತದೆ. ಈ ಕಾರಣದಿಂದ ಇಡೀ ಕವನ ಸಂಕಲನ ಆಸಕ್ತಿಯಿಂದ ಓದಿಸಿಕೊಂಡು ಹೋಗುತ್ತದೆ. ಅಲ್ಲದೆ ಭಗ್ನ ಹೃದಯಿಯ ಅಳಲನ್ನು ಮನಮುಟ್ಟುವಂತೆ ಹೇಳುವುದರಲ್ಲಿ ಯಶಸ್ವಿಯಾಗಿದೆ.

ಯುವ ಪ್ರಣಯಿಗಳ ಕಾತರಿಕೆ, ಅಗಲಿಕೆಗಳು, ಸಂಧಿಸಿದಾಗಿನ ರಸಘಳಿಗೆಗಳು ಗೆಳೆಯನ ಆಕರ್ಷಣೆ, ಮೈಮನಗಳ ಪುಳಕವನ್ನು ಪ್ರೇಮದ ಸೊಬಗನ್ನು ಕೆಳಗಿನ ಅವರ ಕವನದ ಹನಿಗಳು ಸುಂದರವಾಗಿ ಹೇಳುತ್ತವೆ.

ಗೆಳೆಯಾ ನಿನ್ನ
ಕದ್ದು ಕದ್ದು
ನೋಡಿದ ನನ್ನ ಕಂಗಳು
ಮಳೆ ಬಿಲ್ಲ ಸೊಬಗು
ಹೂವುಗಳ ಚಲುವು
ಹೊಂದಿದವು

——

ನಿನ್ನ ಒಂದೇ ಒಂದು
ಸಿಹಿಮುತ್ತು
ನೆನಪಾದರೆ ಸಾಕು
ಆ ಕ್ಷಣ
ಉರಿವ ಸೂರ್ಯನೂ
ಚಂದಿರನಾಗುತ್ತಾನೆ

——

ಎದೆಯ ಬೀಗ
ಮುರಿದು ನಲ್ಲ
ಅದೇನು ದೋಚಿದೆ
ಕಳ್ಳನಾದರೂ
ನಿನ್ನ ಹಿಂದೆಯೇ
ಬರುವಂತೆ ಮಾಡಿದೆ

——

ನನ್ನ ಮೇಲೆ ನಿನಗೆಷ್ಟು ಪ್ರೀತಿ ?
ಎಂದು ಕೇಳಿದ್ದೆ
ನನ್ನ ಪಾದಕ್ಕೆ ಮುತ್ತಿಟ್ಟು
ಅವನು ಮೌನವಾಗಿದ್ದ !

ಕವನಗಳ ತುಂಬೆಲ್ಲ ಭಗ್ನ ಹೃದಯಿಯ ದುಗುಡ, ನೋವು ನೆನಪುಗಳು ತುಂಬಿಕೊಂಡಿದ್ದು ಅಲ್ಲಲ್ಲಿ ಪುನರಾವರ್ತನೆ ಎನಿಸುತ್ತದೆ. ಎಚ್. ಎಸ್. ಮುಕ್ತಾಯಕ್ಕನವರ ಕವನದ ಶೈಲಿಯನ್ನು ಹೋಲುವ ಕವನ ಸಂಕಲನ ಹೊಸತೇನನ್ನೂ ಹೇಳದಿದ್ದರೂ ಲೇಖಕಿಯೊಬ್ಬಳಿಗೆ ತನ್ನ ಅಭಿವ್ಯಕ್ತಿಯ ತೀವ್ರತೆಯನ್ನು ಗುರುತಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ ಎನ್ನಬಹುದು. ಮನಸ್ಸಿನ ಭಾವವನ್ನು ಹಿಡಿದಿಟ್ಟಿರುವ ಅನೇಕ ಕವನಗಳ ಸಾಲುಗಳು ಮೆಚ್ಚುಗೆಯಾಗುತ್ತವೆ.

ನೋವು, ಹತಾಶೆ, ಹೆಣ್ಣಿನ ಭಾವನೆಗಳೊಡನೆ ಚೆಲ್ಲಾಟವಾಡುವ ಗಂಡಿನ 'ಕ್ರೂರತನ'ಗಳನ್ನು ತೀವ್ರವಾಗಿ ಬಿಂಬಿಸಲ್ಪಟ್ಟ ಮತ್ತು ನನಗೆ ಮೆಚ್ಚುಗೆಯಾದ ಕೆಲವು ಕವನಗಳು.

ನೈದಿಲೆ ಅರಳಲು
ತವಕಿಸುತಲಿತ್ತು
ಆದರೇನು
ಆಗರದಲ್ಲಿ ತೇಲಿಬಂತು
ಚಂದಿರನ ಹೆಣ

——

ಹೂವುಗಳ ಮುಂದೆ
ಒಮ್ಮೆ ನನ್ನ ದುಃಖ
ತೋಡಿಕೊಂಡೆ ಅಷ್ಟೆ
ಆದರೆ
ಅವುಗಳು ದಳದಳ
ಹರಿದು ಬೀಳುವವು
ಎಂದುಕೊಂಡಿರಲಿಲ್ಲ.

——

ಕೊಲೆಯಾದ ನನ್ನ
ಕನಸುಗಳ ರಕ್ತ
ಹನಿ ಹನಿ
ಕವಿತೆಗಳಾಗಿ
ತೊಟ್ಟಿಕ್ಕುತ್ತಿದೆ

——

ನೀ ಹೋದ ಗಳಿಗೆ
ಬಿಕ್ಕಿದವು ಕವಿತೆಗಳು
ಹಾಡಿದವು ಪ್ರೀತಿಗೆ
ಚರಮಗೀತೆ

ಸಂಕಲನದ ಪ್ರಾರಂಭದಲ್ಲಿ ಸ್ಮಿತಾರವರೇ ಹೇಳಿಕೊಂಡಂತೆ ಮನ್ಸೂರರ ಸಂಗೀತ ಅವರ ಭಗ್ನ ಹೃದಯಕ್ಕೆ ಮತ್ತೆ ಚೈತನ್ಯ ತುಂಬಿ ಅವರನ್ನು ಬದುಕಿಗೆ ಎಳೆತಂದದ್ದು ತುಂಬಾ ಸಂತೋಷದ ಸಂಗತಿ. ಹೆಣ್ಣೊಬ್ಬಳು ಇಂತಹ ಹತಾಶೆಗೆ ಸಿಲುಕಿದಾಗ ಬದುಕಿನ ಬಗ್ಗೆ ಋಣಾತ್ಮಕವಾಗಿ ಯೋಚಿಸಿ ದುರಂತವನ್ನಪ್ಪುವುದೇ ಈ ಪುರುಷ ಪ್ರಧಾನ ಸಮಾಜದಲ್ಲಿ ಸಾಮಾನ್ಯವಾಗಿರುವಾಗ ಸ್ಮಿತಾರವರ ಈ ಆಯ್ಕೆ ನಿಜಕ್ಕೂ ಶ್ಲಾಘನೀಯ ಮತ್ತು ಮಾರ್ಗದರ್ಶಕ. ಅಗಲಿದ ಮನ್ಸೂರರು ಅವರಲ್ಲಿ ಇನ್ನೂ ಹೆಚ್ಚಿನ ಚೈತನ್ಯವನ್ನು, ನವಶಕ್ತಿಯನ್ನು ತುಂಬಿ ಇನ್ನೂ ದಿಟ್ಟವಾದ ವಿಭಿನ್ನವಾದ ಸಾಹಿತ್ಯ ಕೃತಿಗಳು ಹೊರಹೊಮ್ಮಲಿ. ಮನ್ಸೂರರ ಸಂಗೀತದಂತೆ ಸ್ಮಿತಾರವರ ಸಾಹಿತ್ಯವೂ ತನ್ನದೇ ಆದ ಶೈಲಿಯಲ್ಲಿ ಓದುಗರ ಮನಸ್ಸನ್ನಾಕ್ರಮಿಸಲಿ ಎನ್ನುವುದೇ ನನ್ನ ಆಸೆ. ಸಂಕಲನದ ಕೊನೆಯ ಹನಿ

ತೋಡಿಯಲ್ಲಿ ಅರಳಿದ ಭಾವಗಳು ಇವು
ಹೃದಯ ಹಿಂಡಿದ ತುಣುಕುಗಳು ಇವು
ಸತ್ತ ಕನಸುಗಳಿಗೆ ಶ್ರದ್ಧಾಂಜಲಿ ಇವು
ಮೌನ ಮುರಿದ 'ಭೈರವಿ' ಹನಿಗಳು ಇವು.

# ಪಿತೃ ಪ್ರಧಾನತೆಯ ಉಗಮ : ಕೆಲವು ವಿವರಣೆಗಳು

( ಮುಂದುವರಿದ ಭಾಗ )

○ ಕಮಲಾ ಬಾಸಿನ್

**ಪ್ರ : ಪಿತೃ ಪ್ರಧಾನತೆ ಒಂದು ವ್ಯವಸ್ಥೆ ಎಂಬುದರ ಬಗ್ಗೆ ಈಗ ನಮಗೆ ಸ್ವಲ್ಪ ಸ್ಪಷ್ಟತೆ ಬಂದಿರು ವುದರಿಂದ ಸಹಜವಾಗಿ ಅದರ ಉಗಮದ ಬಗ್ಗೆ ಪ್ರಶ್ನೆ ಮೂಡುತ್ತದೆ. ಪಿತೃಪ್ರಧಾನತೆ ಯಾವಾಗಲೂ ಅಸ್ತಿತ್ವದಲ್ಲಿ ಇತ್ತೆ ?**

ಉ : ಪುರುಷನು ಹುಟ್ಟಿರುವುದೇ ಆಳಲು, ಹೆಂಗಸರು ಪುರುಷರ ಅಧೀನದಲ್ಲಿರಬೇಕಾದವರು ಎಂದು ಕೆಲವರು ನಂಬುತ್ತಾರೆ. ಈ ಶ್ರೇಣೀಕೃತ ವ್ಯವಸ್ಥೆ ಯಾವಾಗಲೂ ಜಾರಿಯಲ್ಲಿತ್ತೆಂದು, ಹಾಗೆಯೇ ಮುಂದೆಯೂ ಜಾರಿಯ ಲ್ಲಿರುತ್ತದೆಯೆಂದು ನಂಬುತ್ತಾರೆ. 'ಪಿತೃ ಪ್ರಧಾನತೆ', ಅಸಹಜವಾದ ಮತ್ತು ಪುರುಷ ನಿರ್ಮಿತ ವ್ಯವಸ್ಥೆ ಯಾದುದರಿಂದ ಇದನ್ನು 'ಬದಲಾವಣೆ' ಮಾಡಬಹು ದೆಂದು ಕೆಲವರು ಈ ನಂಬಿಕೆಯನ್ನು ಪ್ರಶ್ನಿಸುತ್ತಾರೆ. ಈ ವ್ಯವಸ್ಥೆಗೆ ಒಂದು ಪ್ರಾರಂಭವಿದೆ ಹಾಗೆಯೇ ಅಂತ್ಯವೂ ಇದೆ.

ಒಂದು ಶತಮಾನದಿಂದ ಪಿತೃಪ್ರಧಾನ ವ್ಯವಸ್ಥೆ ಸಾರ್ವತ್ರಿಕವಾದುದು ಎಂದು ನಂಬಿರುವವರ ಹಾಗೂ ಇದನ್ನು ವಿರೋಧಿಸುವವರ ನಡುವೆ ಚರ್ಚೆ ನಡೆಯು ತ್ತಲೇ ಬಂದಿದೆ. ಪಿತೃಪ್ರಧಾನತೆಯ ಉಗಮ ಮತ್ತು ಅಸ್ತಿತ್ವದ ಬಗ್ಗೆ ಸ್ತ್ರೀವಾದಿಗಳ ಪ್ರಮುಖ ಚಿಂತನೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ. ಓದುಗರು ಆಳವಾದ ಗ್ರಹಿಕೆಗೆ ಇತರೆ ಸಂಬಂಧಪಟ್ಟ ಬರಹಗಳನ್ನೂ ಗಮನಿಸ ಬಹುದು.

### ಸಂಪ್ರದಾಯಿಕ ದೃಷ್ಟಿಕೋನ

ಶಾರೀರಿಕ ರಚನೆಯೇ ಪಿತೃಪ್ರಧಾನತೆಯ ನಿರ್ಣಾಯಕ ಅಂಶವೆಂಬುದನ್ನು ಎಲ್ಲೆಡೆಯಲ್ಲೂ ಸಂಪ್ರದಾಯಸ್ಥರು ಒಪ್ಪಿಕೊಳ್ಳುತ್ತಾರೆ. ಗರ್ಡಾಲರ್ನರ್ ಪ್ರಕಾರ ಸಂಪ್ರದಾಯವಾದಿಗಳು, ಧಾರ್ಮಿಕ ಚೌಕಟ್ಟಿನೊಳ ಗಾಗಲೀ ಅಥವಾ ವೈಜ್ಞಾನಿಕ ಚೌಕಟ್ಟಿನೊಳಗಾಗಲೀ ಕೆಲಸ ಮಾಡಲಿ ಅವರು ಸ್ತ್ರೀಯರ ಪರಾಧೀನತೆಯನ್ನು ಸಾರ್ವತ್ರಿಕವಾದ, ಸಹಜವಾದ ಮತ್ತು ದೇವರ ಕೊಡುಗೆಯಾದುದರಿಂದ ಅಚಲವಾದುದೆಂದು ಪರಿಗಣಿ ಸುತ್ತಾರೆ. ಇದು ಇಂದೂ ಸಹ ಜೀವಂತವಾಗಿರ ಬೇಕಾದರೆ ಅದು ಉತ್ತಮವಾಗಿರಲೇಬೇಕು. ಹಾಗೆ ಮುಂದೆಯು ಇದೇ ರೀತಿ ಚಲಾವಣೆಯಲ್ಲಿರಬೇಕಾ ಗುತ್ತದೆ.

ಈಕೆ ಸಂಪ್ರದಾಯವಾದಿಗಳ ವಾದವನ್ನು ಈ ರೀತಿ ಸಂಗ್ರಹಿಸುತ್ತಾಳೆ. ಸ್ತ್ರೀಯರು ಪರಾಧೀನತೆಯಲ್ಲಿರು ವುದಕ್ಕೆ ಜನ್ಮ ತಾಳಿರುವುದರಿಂದ ಅವರು ಪುರುಷರಿಗೆ ಅಧೀನರಾಗಿಯೇ ಇರಬೇಕಾಗುತ್ತದೆ. 'ಸ್ತ್ರೀಯರಿಗೆ ಭಿನ್ನ ಪಾತ್ರಗಳನ್ನು ಹಾಗೂ ಕೆಲಸಗಳನ್ನು ವಹಿಸ ಲಾಗಿದೆ' ಎಂದು ಧಾರ್ಮಿಕ ಪರಿಭಾಷೆಯಲ್ಲಿ ಹೇಳಲಾಗು ತ್ತದೆ. ಶಾರೀರಿಕ ರಚನೆಯನ್ನು ಆಧರಿಸಿದ ಲಿಂಗಾಧರಿತ ಶ್ರಮ ವಿಭಜನೆಯನ್ನು ಎಲ್ಲಾ ಖ್ಯಾತ ವಿಜ್ಞಾನಿಗಳು ಒಪ್ಪಿಕೊಳ್ಳುತ್ತಾರೆ. ಶಾರೀರಿಕ ಕಾರ್ಯಗಳು ವಿಶಿಷ್ಟ ವಾಗಿರುವುದರಿಂದ ಅವು ಸಹಜವಾಗಿಯೇ ವಿಭಿನ್ನ ಸಾಮಾಜಿಕ ಪಾತ್ರ ಹಾಗೂ ಜವಾಬ್ದಾರಿಯನ್ನು ಹೊಂದಿ ರುತ್ತದೆ. ಈ ವ್ಯತ್ಯಾಸಗಳು ಸಹಜವಾದವುಗಳು. ಲಿಂಗ ಅಸಮಾನತೆ ಅಥವಾ ಪುರುಷರ ದಬ್ಬಾಳಿಕೆಗೆ ಯಾರನ್ನು ನಿಂದಿಸಲಾಗದು. ಸಂಪ್ರದಾಯ ವಾದಿಗಳ ಪ್ರಕಾರ "ಸ್ತ್ರೀಯರ ಹೆರುವ ಕ್ರಿಯೆಯಿಂದಾಗೆಯೇ ಅವರ ಜೀವನದ ಪರಮ ಧ್ಯೇಯ ತಾಯಿಯಾಗುವುದಾಗುತ್ತದೆ, ಅವರ ಪ್ರಮುಖ ಕೆಲಸ ಮಕ್ಕಳನ್ನು ಹೆತ್ತು, ಹೊತ್ತು ಸಾಕಿ ಸಲಹುವುದು.

ಪುರುಷರು ಅಧಿಕ ದೈಹಿಕ ಶಕ್ತಿಯನ್ನು ಹೊಂದಿರು ವುದರಿಂದ ಬೇಟೆಯಾಡುವವರು, ಯುದ್ಧದ ಹರಿಕಾರರು, ಮನೆಗೆ ಬೇಕಾದುದನ್ನೆಲ್ಲಾ ಹವಣಿಸುವವರು ಎಂಬ ಪ್ರತಿವಾದವನ್ನು ಇಡಲಾಗಿದೆ. ಸ್ತ್ರೀಯರು ಮಕ್ಕಳನ್ನು ಹೆರುವುದರಿಂದ ಅವರು ಮಕ್ಕಳ ಪಾಲನೆ-ಪೋಷಣೆಯಲ್ಲಿ ತೊಡಗಿರಬೇಕಾಗುತ್ತದೆ. ಅವರಿಗೆ ಪುರುಷ ರಕ್ಷಣೆ ಬೇಕಾಗುತ್ತದೆ. ಈಕೆಯ ಪ್ರಕಾರ ಈ ಶಾರೀರಿಕ ರಚನೆಯ

ನಿರ್ಣಾಯಕ ವಿವರಣೆಯು ಶಿಲಾಯುಗದಿಂದ ಇಂದಿನ ವರೆಗೆ ಯಥಾವತ್ತಾಗಿ ನಿರಂತರವಾಗಿ ಹರಿದು ಬಂದಿದೆ ಯಲ್ಲದೆ ಪುರುಷರು ಹುಟ್ಟಿನಿಂದಲೇ ಶ್ರೇಷ್ಠರು ಎಂಬ ನಂಬಿಕೆಯನ್ನು ಇದು ಹೊಂದಿದೆ.

ಬೇಟೆಗಾರರು ಹಾಗೂ ಆಹಾರ ಸಂಗ್ರಹಣೆ ಮಾಡುವ ಸಮಾಜವನ್ನು ಕುರಿತು ನಡೆಸಿದ ಅಧ್ಯಯನ "ಪುರುಷರು ಶಾರೀರಿಕ ರಚನೆಯಿಂದ ಶ್ರೇಷ್ಠರೂ ಕುಟುಂಬಕ್ಕೆ ಅಗತ್ಯ ವಾದುದನ್ನೆಲ್ಲಾ ಹವಣಿಸುವವರು" ಎಂಬ ಆಧಾರದ ಮೇಲಿನ ವಿವರಣೆಗೆ ತನ್ನ ಅಸಮ್ಮತಿಯನ್ನು ಸೂಚಿಸು ತ್ತದೆ. ಇಂತಹ ಸಮಾಜಗಳಿಗೆ ಬೇಟೆಯಿಂದ ಕೆಲಸಮಯ ಮಾತ್ರ ಆಹಾರ ದೊರೆಯುತ್ತಿತ್ತು. ಉಳಿದ ಸಮಯ ದಲ್ಲಿ ಸ್ತ್ರೀಯರ ಮತ್ತು ಮಕ್ಕಳ ಆಹಾರ ಸಂಗ್ರಹಣಾ ಕಾರ್ಯದಿಂದ ಕ್ರಮವಾಗಿ ಆಹಾರ ಸರಬರಾಜು ಆಗು ತ್ತಿತ್ತು. ಈ ಸಮಾಜಗಳಲ್ಲಿ ಗಂಡು ಹೆಣ್ಣಿನ ನಡುವೆ ಪರಸ್ಪರ ಪೂರಕ ಸಂಬಂಧಗಳು ಅಸ್ತಿತ್ವದಲ್ಲಿದ್ದುದಕ್ಕೆ ಸಾಕಷ್ಟು ಅದ್ಭುತವಾದ ಪುರಾವೆಗಳು ದೊರೆಯುತ್ತವೆ. ಇಂದಿಗೂ ದಕ್ಷಿಣ ಏಶಿಯಾದಲ್ಲಿ ಬುಡಕಟ್ಟು ಜನಾಂಗದಲ್ಲಿ ಸ್ತ್ರೀಯರಿಗೆ ಹೆಚ್ಚಿನ ಗೌರವ ನೀಡಲಾಗುತ್ತದೆಯಲ್ಲದೆ, ಗಂಡು ಹೆಣ್ಣಿನ ಸ್ಥಾನಮಾನದ ನಡುವಿರುವ ವ್ಯತ್ಯಾಸದ ಅಂತರಗಳು ಕಡಿಮೆ ಇರುವುದಲ್ಲದೆ, ಅವು ಸ್ತ್ರೀಯರಿಗೆ ಅಷ್ಟು ಮಾರಕವಾಗಿಲ್ಲವೆನ್ನಬಹುದು.

ಪುರುಷ ಶ್ರೇಷ್ಠತೆ ಹಾಗೂ ಲಿಂಗಾಧಾರಿತ ಶ್ರಮ ವಿಭಜನೆ ಸಹಜವಾಗಿರುವುದಾದರೆ ವಿಭಿನ್ನ ಸಮಾಜಗಳಲ್ಲಿ ಸ್ತ್ರೀ ಮತ್ತು ಪುರುಷರ ಪಾತ್ರಗಳ ನಡುವೆ ಅಪಾರವಾದ ವ್ಯತ್ಯಾಸಗಳನ್ನು ಕಾಣಲು ಸಾಧ್ಯವಿಲ್ಲ. ಗಂಡು ಹೆಣ್ಣಿನ ಸ್ಥಾನಮಾನ ಹಾಗೂ ಅಧಿಕಾರವನ್ನು ಹೆಚ್ಚು ಶ್ರೇಣೀಕರಣ ಗೊಳಿಸದೇ ಇರುವ ಸಂಪ್ರದಾಯ ಅಥವಾ ಆದಿಮ ಸಮಾಜಗಳು ನಮ್ಮಲ್ಲಿವೆ.

ಸಂಪ್ರದಾಯಿಕ ದೃಷ್ಟಿಕೋನ ಕೇವಲ ಸಂಪೂರ್ಣ ವಾಗಿ ಧಾರ್ಮಿಕ ವಿಚಾರಧಾರೆಯ ಸೊತ್ತಲ್ಲ. ಪುರುಷರು ಶ್ರೇಷ್ಠರು, ಸ್ತ್ರೀಯರ ಕೀಳೆಂಬ ನಿಲುವನ್ನು ಧಾಂಬಿಕ ವೈಜ್ಞಾನಿಕ ಸಿದ್ಧಾಂತಗಳೂ ಸಹ ಪ್ರತಿಪಾದಿಸುತ್ತಿವೆ. ಮಕ್ಕಳನ್ನು ಹೆರುವ ಕ್ರಿಯೆ ಹಾಗೂ ಋತುಸ್ರಾವದಿಂದ ಸ್ತ್ರೀಯರು ಅಸಮರ್ಥರು ಹಾಗೂ ದುರ್ಬಲರೂ ಆಗುತ್ತಾರೆಂದು ಅವರಲ್ಲಿ ಕೆಲವರು ವಾದಿಸುತ್ತಾರೆ.

ಅರಿಸ್ಟಾಟಲ್ ಪುರುಷರು "ಕ್ರಿಯಾಶೀಲರು" ಸ್ತ್ರೀಯರು ನಿರ್ವೀರ್ಯರು ಎಂಬ ಸಿದ್ಧಾಂತವನ್ನು ಕಂಡು ಹಿಡಿದು "ಸ್ತ್ರೀಯರೆಂದರೆ ಊನಗೊಂಡ ಪುರುಷರು" ಆತ್ಮವಿಲ್ಲದವರೆಂದು ವಾದಿಸುತ್ತಾನೆ. ಅವನ ದೃಷ್ಟಿಯಲ್ಲಿ "ಶಾರೀರಿಕ ಕೀಳರಿಮೆ ಅವಳ ಸಾಮರ್ಥ್ಯ, ವೈಚಾರಿಕ ಶಕ್ತಿ ಹಾಗೂ ನಿರ್ಧಾರ ತೆಗೆದುಕೊಳ್ಳುವ ಶಕ್ತಿ ಯನ್ನು ಕುಂದಿಸುತ್ತದೆ. ಪುರುಷನು ಶ್ರೇಷ್ಠನಾದವನು ಸ್ತ್ರೀಯು ಕೀಳಾದವಳು. ಅವನು ಆಳಲು, ಇವಳು ಆಳಿಸಿ ಕೊಳ್ಳಲು ಹುಟ್ಟಿದವರು. ಪುರುಷನ ಶೌರ್ಯ 'ಆಜ್ಞೆ' ನೀಡುವುದರಲ್ಲಿ ವ್ಯಕ್ತವಾದರೆ, ಸ್ತ್ರೀಯರ ಶೌರ್ಯ ಅದನ್ನು ವಿಧೇಯತೆಯಿಂದ ಪಾಲಿಸುವುದರಲ್ಲಿ ಅಡಗಿದೆಯೆಂದು ಅರಿಸ್ಟಾಟಲ್ ಹೇಳಿದ್ದಾನೆ.

ಆಧುನಿಕ ಮನೋವಿಜ್ಞಾನವೂ ಸಹ ಇಂತಹದೇ ವಿಚಾರಧಾರೆಯನ್ನು ಮುಂದುವರಿಸಿಕೊಂಡು ಹೋಗು ತ್ತಿದೆಯೆಂದು ಹಲವಾರು ಸ್ತ್ರೀವಾದಿಗಳು ಗುರುತಿಸು ತ್ತಾರೆ. ಸ್ತ್ರೀಯರ ದೈಹಿಕ ರಚನೆ ಅವರ ಮನೋಭಾವನೆ ಗಳನ್ನು ನಿರ್ಧರಿಸುವುದರಿಂದ ಅವರ ಸಾಮರ್ಥ್ಯ ಹಾಗೂ ಪಾತ್ರದ ಮೇಲೆ ಪರಿಣಾಮವನ್ನು ಬೀರುತ್ತದೆ. ಉದಾಹರಣೆಗೆ ಸಿಗ್ಮಂಡ ಫ್ರಾಯ್ಡ "ಸ್ತ್ರೀಯ ಶಾರೀರಿಕ ರಚನೆಯೇ ಅವಳ ಹಣೆಯ ಬರಹವನ್ನು ನಿರ್ಧರಿಸುತ್ತದೆ ಯೆಂದು ಹೇಳಿದ್ದಾನೆ. ಫ್ರಾಯ್ಡನ ಪ್ರಕಾರ ಪುರುಷ ಆರೋಗ್ಯವಂತ ಜೀವಿ. ಹೆಂಗಸು ದಾರಿ ತಪ್ಪಿದವಳು ಅವಳಲ್ಲಿ ಪುರುಷನ ಲೈಂಗಿಕಾಂಗ ಇಲ್ಲದ ಕಾರಣ ಈ ಕೊರತೆಯನ್ನು ನೀಗಿಸಲು ಅವಳ ಸಂಪೂರ್ಣ ಮನೋ ರಚನೆ, ಆ ಕೊರತೆಯನ್ನು ತುಂಬಿಸಿಕೊಳ್ಳುವುದರ ಸುತ್ತ ಕೇಂದ್ರೀಕೃತವಾಗಿರುತ್ತದೆ. ಫ್ರಾಯ್ಡನ ಈ ಜನಪ್ರಿಯ ತತ್ವ ಆಗ ಶಿಕ್ಷಕರಿಗೆ, ಸಾಮಾಜಿಕ ಕಾರ್ಯಕರ್ತರಿಗೆ, ಚಿಕಿತ್ಸಕ ಗ್ರಂಥವಾಯಿತು.

ಬಹಳಷ್ಟು ಜನರು ಪುರುಷರ ಪ್ರಭುತ್ವವನ್ನು ಎತ್ತಿ ಹಿಡಿಯುವ ಇಂತಹ ಸಿದ್ಧಾಂತಗಳನ್ನು ಪ್ರಶ್ನಿಸಿದ್ದಾರೆ. ಇಂತಹ ಸಿದ್ಧಾಂತಗಳಿಗೆ ಯಾವುದೇ ಐತಿಹಾಸಿಕ, ವೈಜ್ಞಾನಿಕ ಪುರಾವೆಗಳು ಇಲ್ಲವೆಂಬುದನ್ನು ರುಜುವಾತು ಮಾಡಿದ್ದಾರೆ. ಸ್ತ್ರೀ ಪುರುಷರ ನಡುವೆ ಶಾರೀರಿಕ ವ್ಯತ್ಯಾಸ ಗಳು ಇರುವುದು ವಾಸ್ತವಾಂಶವಾದರೆ, ಈ ವ್ಯತ್ಯಾಸ ಗಳಿಂದಾಗಿ ಕೆಲಮಟ್ಟಿಗೆ ಅವರು ನಿರ್ವಹಿಸುವ ಪಾತ್ರ ಗಳಲ್ಲಿಯು ವ್ಯತ್ಯಾಸ ಉಂಟಾಗುತ್ತದೆ. ಆದರೆ ಇದು ಪುರುಷರ ಪ್ರಭುತ್ವವನ್ನು ಎತ್ತಿ ಹಿಡಿಯುವ, ಲೈಂಗಿಕ

ಶ್ರೇಣೀಕರಣಕ್ಕೆ ತಳಹದಿಯಾಗಲಾರದು. ಇಂತಹ ಸಿದ್ಧಾಂತಗಳನ್ನು ನಾಶಪಡಿಸುವುದರ ಮೂಲಕ "ಪಿತೃ ಪ್ರಧಾನತೆ ಪುರುಷ ನಿರ್ಮಿತವಾದುದು ಹಾಗೂ ಅದು ಐತಿಹಾಸಿಕ ಪ್ರಕ್ರಿಯೆಯಿಂದ ಉಂಟಾದುದೆಂದು ಗುರುತಿಸಲು ನಮಗೆ ಸಾಧ್ಯವಾಗುತ್ತದೆ.

**ಪ್ರಶ್ನೆ : ಯಾವ ಸಿದ್ಧಾಂತಗಳು ಸ್ತ್ರೀಯರ ಅಧೀನತೆ ಸಾರ್ವತ್ರಿಕಗೊಳಿಸುವಿಕೆಯನ್ನು ತಿರಸ್ಕರಿಸುತ್ತವೆ ಹಾಗೂ ಪಿತೃಪ್ರಧಾನತೆಯ ಉಗಮವನ್ನು ಪರಿಶೋಧಿಸುತ್ತವೆ?**

ಉ : ಸುಮಾರು ನೂರು ವರ್ಷಗಳಿಂದಲೂ ಸ್ತ್ರೀ ಮತ್ತು ಪುರುಷರಿಬ್ಬರೂ ಪಿತೃಪ್ರಧಾನತೆಯ ಉಗಮವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ಮಾಡುತ್ತಲೇ ಬಂದಿದ್ದಾರೆ. ಪಿತೃಪ್ರಧಾನತೆಯ ಮೊದಲು ಮಾತೃಪ್ರಧಾನತೆ ಅಸ್ತಿತ್ವದಲ್ಲಿತ್ತೆ ? ಇದ್ದರೆ, ಅಂತಹ ಸಮಾಜದಲ್ಲಿ ಸ್ತ್ರೀಯರು ಪುರುಷರ ಮೇಲೆ ಅಧಿಕಾರವನ್ನು ಚಲಾಯಿಸುತ್ತಿದ್ದರೆ ? ಅಥವಾ ಗಂಡು-ಹೆಣ್ಣಿನ ನಡುವೆ ಸಮಾನತೆ ಇತ್ತೆ ? ವಿಭಿನ್ನವಾದ ಪಾತ್ರಗಳನ್ನು ಹೇಗೆ ನೀಡಲಾಗುತ್ತಿತ್ತು ? ಸ್ತ್ರೀಯರ ಪರಾಧೀನತೆ ಎಂದಿನಿಂದ ಪ್ರಾರಂಭವಾಯಿತು ? ಇಂತಹ ಪ್ರಶ್ನೆಗಳನ್ನು ಕೇಳುವುದು ಹಾಗೂ ಉತ್ತರವನ್ನು ಕಂಡುಕೊಳ್ಳುವುದು ಕೇವಲ ನಮ್ಮ ಭೂತಕಾಲದ ಬಗೆಗಿರುವ ಕುತೂಹಲವನ್ನು ತಣಿಸಿಕೊಳ್ಳಲು ಮಾತ್ರವಲ್ಲ ಪಿತೃಪ್ರಧಾನತೆಯ ಉಗಮವನ್ನು ಅರ್ಥಮಾಡಿಕೊಳ್ಳಲು ಅದನ್ನು ಪ್ರಶ್ನಿಸಲು ಹಾಗೂ ಲೈಂಗಿಕ ಶ್ರೇಣೀಕರಣವಿಲ್ಲದ ಸಮಾಜವನ್ನು ನಿರ್ಮಿಸಲು ಮುಖ್ಯವಾಗುತ್ತದೆ.

ಯಾವುದು ಬದಲಾವಣೆಯಾಗಬೇಕಾಗಿದೆಯೆನ್ನುವ ಅವಶ್ಯಕತೆಯ ಮೇಲೆ ರೂಪಿತವಾದ ತತ್ವಗಳ ಆಧಾರದ ಮೇಲೆ ಕಾರ್ಯತಂತ್ರಗಳನ್ನು ರೂಪಿಸಬೇಕಾಗಿದೆ. ಪಿತೃಪ್ರಧಾನತೆಯ ಬಗ್ಗೆ ಒಂದೇ ವಿವರಣೆಯನ್ನು ಎಲ್ಲರೂ ಒಪ್ಪಿಕೊಳ್ಳುವುದಿಲ್ಲ. ಇಲ್ಲಿ ಇಂತಹ ಕೆಲವು ಪ್ರಮುಖ ಸಿದ್ಧಾಂತಗಳನ್ನು ಸಂಕ್ಷಿಪ್ತವಾಗಿ ನೀಡಲು ಪ್ರಯತ್ನಿಸಲಾಗಿದೆ.

1884ರಲ್ಲಿ ಫೆಡ್ರಿಕ್ಎಂಗೆಲ್ಸ್ ತನ್ನ "ಆರೀಜನ್ ಆಫ್ ಫ್ಯಾಮಿಲಿ ಪ್ರೈವೇಟ್ ಪ್ರಾಪರ್ಟಿ ಅಂಡ ದಿ ಸ್ಟೇಟ್" ಪುಸ್ತಕದಲ್ಲಿ ಪಿತೃಪ್ರಧಾನತೆಯ ಉಗಮದ ಬಗ್ಗೆ ಅತಿ ಮುಖ್ಯವಾದ ವಿವರಣೆಯನ್ನು ನೀಡಿದ್ದಾನೆ. ಎಂಗೆಲ್ಸ್ ಪ್ರಕಾರ ಸ್ತ್ರೀಯರ ಪರಾಧೀನತೆ ಖಾಸಗಿ ಆಸ್ತಿಯ ಕಲ್ಪನೆಯೊಂದಿಗೆ ಪ್ರಾರಂಭವಾಯಿತಲ್ಲದೆ ಅದರೊಂದಿಗೆ ಜಗತ್ತಿನ ಸ್ತ್ರೀಯರ ಐತಿಹಾಸಿಕ ಸೋಲು ಉಂಟಾಯಿತು. ವರ್ಗವಿಭಜನೆ ಮತ್ತು ಸ್ತ್ರೀಯರ ಶೋಷಣೆ ಐತಿಹಾಸಿಕವಾಗಿ ಬೆಳವಣಿಗೆಯಾದವುಗಳು. ವರ್ಗವಿಭಜನೆ ಹಾಗೂ ಲೈಂಗಿಕ ತಾರತಮ್ಯವಿಲ್ಲದ ಸಮಾಜ ಒಂದು ಕಾಲದಲ್ಲಿ ಅಸ್ತಿತ್ವದಲ್ಲಿತ್ತು. ಸವೇಜರಿ, ಬಾರ್ಬರಿಸಂ ಹಾಗೂ ನಾಗರೀಕ ಸಮಾಜ ಹೀಗೆ ಸಮಾಜ ಮೂರು ಹಂತಗಳನ್ನು ಎಂಗೆಲ್ಸ್ ಗುರುತಿಸುತ್ತಾನೆ. ಸವೇಜರಿ ಸಮಾಜದಲ್ಲಿ ಮನುಷ್ಯರು ಪ್ರಾಣಿಗಳ ತರಹ ಬದುಕಿ ಬೇಟೆಯಾಡಿ ಆಹಾರ ಸಂಗ್ರಹಣೆ ಮಾಡುತ್ತಿದ್ದರು. ತಾಯಿಯ ಮೂಲಕ ವಂಶಾವಳಿಯನ್ನು ಗುರುತಿಸುತ್ತಿದ್ದರೂ, ವಿವಾಹದ ಕಲ್ಪನೆಯಾಗಲಿ, ಖಾಸಗೀ ಆಸ್ತಿಯ ಕಲ್ಪನೆಯಾಗಲೀ ಇರಲಿಲ್ಲ.

ಆಹಾರ ಸಂಗ್ರಹಣೆ ಹಾಗೂ ಬೇಟೆಯಾಡುವುದು ಬಾರ್ಬರಿಸಂ ಸಮಾಜದಲ್ಲೂ ಮುಂದುವರಿಯಿತಲ್ಲದೆ; ಕ್ರಮೇಣ ವ್ಯವಸಾಯ ಹಾಗೂ ಹೈನುಗಾರಿಕೆಯಲ್ಲಿ ತೊಡಗಿದರು. ಪುರುಷರು ಬೇಟೆಗಾಗಿ ದೂರ ಹೋಗುತ್ತಿದ್ದಾಗ ಸ್ತ್ರೀಯರು ಮನೆ-ಮಕ್ಕಳನ್ನು ನೋಡಿಕೊಳ್ಳಲು ಮನೆಯಲ್ಲಿಯೇ ಉಳಿಯುತ್ತಿದ್ದಳು. ಲಿಂಗಾಧಾರಿತ:ಶ್ರಮ ವಿಭಜನೆ ಕ್ರಮೇಣ ಪ್ರಾರಂಭವಾಯಿತು. ಆದರೂ ಸ್ತ್ರೀಯರು ತಮ್ಮ ಬುಡಕಟ್ಟುವಿನ ಮೇಲೆ ಅಧಿಕಾರ ಹಾಗೂ ನಿಯಂತ್ರಣವನ್ನು ಹೊಂದಿದ್ದರು. ಇಂತಹ ಬುಡಕಟ್ಟು ಜನಾಂಗದೊಳಗೆ ವರ್ಗ ಅಸ್ತಿತ್ವದಲ್ಲಿರಲಿಲ್ಲ. ಆದರೆ ಒಂದು ಜನಾಂಗಕ್ಕೂ ಇನ್ನೊಂದು ಜನಾಂಗಕ್ಕೂ ಅಂತಃಕಲಹಗಳು ನಡೆಯುತ್ತಿದ್ದವು.

ಪ್ರಾಣಿಗಳನ್ನು ಸಾಕುವುದನ್ನು ಕಲಿಯುವುದರ ಜೊತೆಗೆ ಪುರುಷರು ಸಂತಾನೋತ್ಪತ್ತಿಯಲ್ಲಿ ತಮ್ಮ ಪಾತ್ರವನ್ನು ಸಹ ಅರಿತುಕೊಂಡರು. ದೊಡ್ಡ ದೊಡ್ಡ ಬೇಟೆಗಳಿಗಾಗಿ ತಯಾರಿಸಲಾದ ಉಪಕರಣಗಳನ್ನು ಜನಾಂಗಗಳ ಅಂತಃಕಲಹದ ಸಮಯದಲ್ಲಿ ಬಳಸಲಾಗುತ್ತಿತ್ತು. ಕ್ರಮೇಣ ಗುಲಾಮಗಿರಿ ಪದ್ಧತಿಯು ಬೆಳವಣಿಗೆಯಾಯಿತು. ಬುಡಕಟ್ಟು ಜನಾಂಗದವರು ಪ್ರಾಣಿಗಳ ಜೊತೆಗೆ ಗುಲಾಮರನ್ನು, ಸ್ತ್ರೀಯರನ್ನು ಖಾಸಗಿ ಆಸ್ತಿಯ

ರೂಪದಲ್ಲಿ ಪಡೆಯತೊಡಗಿದರು. ಇದು ಲಿಂಗಾಧಾರಿತ ಶ್ರಮವಿಭಜನೆಗೆ ಕಾರಣವಾಯಿತು. ಪುರುಷರು ಇತರರ ಮೇಲೆ ಅಧಿಕಾರವನ್ನು ಹೊಂದುವುದರ ಜೊತೆಗೆ ಪ್ರಾಣಿಗಳು ಹಾಗೂ ಗುಲಾಮರ ರೂಪದಲ್ಲಿ ಆಸ್ತಿಯನ್ನು ಸಂಗ್ರಹಿಸತೊಡಗಿದರು. ಇದು ಖಾಸಗೀ ಆಸ್ತಿಯ ಹಾಗೂ ಅಧಿಕಾರವನ್ನು ಹೊಂದುವುದರ ಜೊತೆಗೆ ಅದನ್ನು ತಮ್ಮ ಮಕ್ಕಳಿಗೆ ವರ್ಗಾವಣೆ ಮಾಡಲು ಬಯಸಿದ್ದರು. ಈ ಉತ್ತರಾಧಿಕಾರವನ್ನು ಭದ್ರಪಡಿಸಿಕೊಳ್ಳಲು "ತಾಯಿಗಿದ್ದ ಹಕ್ಕನ್ನು ಕಿತ್ತು ಹಾಕಲಾಯಿತು. ತಂದೆಯ ಹಕ್ಕನ್ನು ಊರ್ಜಿತಗೊಳಿಸುವ ಈ ಪ್ರಯತ್ನದಲ್ಲಿ ಸ್ತ್ರೀಯರು ಗೃಹಕೃತ್ಯಗಳಿಗೆ ಸೀಮಿತವಾಗಬೇಕಾಯಿತಲ್ಲದೆ ಅವಳ ಲೈಂಗಿಕತೆಯ ಮೇಲೆ ನಿರ್ಭಂದವನ್ನು ಹೇರಿ ನಿಯಂತ್ರಿಸಲಾಯಿತು. ಈ ಉದ್ದೇಶಗಳಿಂದಾಗಿಯೇ ಪಿತೃಪ್ರಧಾನತೆ ಹಾಗೂ ಏಕಪತ್ನಿತ್ವವನ್ನು ಸ್ಥಾಪಿಸಲಾಯಿತೆಂದು ಏಂಗೆಲ್ಸ್ ಹೇಳುತ್ತಾನೆ.

ಪುರುಷರಿಂದ ನಿಯಂತ್ರಣಗೊಂಡ ಉತ್ಪಾದನಾ ಕ್ಷೇತ್ರದಲ್ಲಿ ನಿರುದ್ಯೋಗ ಉಂಟಾದುದರಿಂದ ಸ್ತ್ರೀಯರು ಆರ್ಥಿಕವಾಗಿ ಪರಾವಲಂಭಿಯಾದರು. ಏಂಗೆಲ್ಸ್‌ನ ಪ್ರಕಾರ ಆಧುನಿಕ ಸಮಾಜ ಸ್ತ್ರೀಯರ ಸಂತಾನೋತ್ಪತ್ತಿಯ ಮೂಲಕ ತಮ್ಮ ಆಸ್ತಿಯ ಉತ್ತರಾಧಿಕಾರಿಗಳನ್ನು ಸೃಷ್ಟಿಸುವ ಸೀಮಿತ ಕ್ರಿಯೆಯ ಆಧಾರದ ಮೇಲೆ ನಿಂತಿದೆಯೆಂದು ಭಾವಿಸುತ್ತಾನೆ. ಇದು ವೈವಾಹಿಕ ಜೀವನದಲ್ಲಿ ದ್ವಿಮುಖ ನೀತಿಯ ಪ್ರಾರಂಭಕ್ಕೆ ಬೀಜವನ್ನು ಬಿತ್ತಿತು. ಏಂಗೆಲ್ಸ್‌ನ ಪ್ರಕಾರ 'ರಾಜ್ಯ'ದ ಪರಿಕಲ್ಪನೆಯ ಬೆಳವಣಿಗೆ ಏಕಪತ್ನಿತ್ವ ಕುಟುಂಬವನ್ನು ಪಿತೃಪ್ರಧಾನ ಕುಟುಂಬವನ್ನಾಗಿ ಪರಿವರ್ತಿಸಿತು. ಇಂದು ಹೆಂಡತಿಯನ್ನೇ ಸಂಪೂರ್ಣವಾಗಿ ಕುಟುಂಬಕ್ಕೆ ಸೀಮಿತಗೊಳಿಸಿತಲ್ಲದೆ ಸಾಮಾಜಿಕ ಉತ್ಪಾದನೆಯಲ್ಲಿ ಅವಳ ಭಾಗವಹಿಸುವಿಕೆಯನ್ನು ಸಂಪೂರ್ಣವಾಗಿ ಹೊರತುಪಡಿಸಿ ಅವಳನ್ನು ಕುಟುಂಬದ ಮುಖ್ಯ ಸೇವಕಿಯನ್ನಾಗಿಸಿತು.

ತಾಯಿಯ ಹಕ್ಕನ್ನು ಕಿತ್ತೊಗೆದದ್ದು ಸ್ತ್ರೀ ಜನಾಂಗಕ್ಕೆ ಉಂಟಾದ ಜಾಗತಿಕ ಐತಿಹಾಸಿಕ ಸೋಲು. ಪುರುಷ ಮನೆಯಲ್ಲಿಯೂ ತನ್ನ ಅಧಿಕಾರವನ್ನು ಸ್ಥಾಪಿಸಿದ. ಸ್ತ್ರೀಯು ಅಡಿಯಾಳಾದಳಲ್ಲದೆ, ಕಾಮತೃಷೆಗೆ ಹಾಗೂ ಹೆರುವ ಕ್ರಿಯೆಗೆ ಕೈಗೊಂಬೆಯಾದಳು.

ಬೂರ್ಜ್ವ ಸ್ತ್ರೀಯರ ಹಾಗೂ ದುಡಿಯುವ ವರ್ಗದ ಸ್ತ್ರೀಯರು ನಡುವೆ ವ್ಯತ್ಯಾಸವಿದೆಯೆನ್ನುತ್ತಾನೆ ಏಂಗೆಲ್ಸ್. ಬೂರ್ಜ್ವಾ ಸ್ತ್ರೀಯಾದವಳು ಮನೆಯ ಚೌಕಟ್ಟಿನಿಂದ ಆಚೆ ದುಡಿಯುವವಳಲ್ಲ. ಅವಳು ಸಂಪೂರ್ಣವಾಗಿ ಗಂಡನನ್ನು ಅವಲಂಭಿಸಿರುವವಳು. ಅವಳೇ ಒಂದು ಆಸ್ತಿ. ಅವಳ ಒಂದೇ ಕಾರ್ಯವೆಂದರೆ ವಾರಸುದಾರರನ್ನು ಸೃಷ್ಟಿಸುವುದು. ಆದರೆ ದುಡಿಯುವ ವರ್ಗದ ಹೆಂಗಸು ಉತ್ಪಾದನೆಯಲ್ಲಿ ತೊಡಗಿರುವುದರ ಮೂಲಕ ತನ್ನ ಶೋಷಣೆಯ ಸಂಕೋಲೆಯನ್ನು ಮುರಿದಿದ್ದಾಳೆ. ದುಡಿಯುವ ವರ್ಗದ ಹೆಂಗಸು ಶೋಷಣೆಗೊಳಗಾಗಲು ಯಾವುದೇ ಆಧಾರಗಳಿಲ್ಲ. ದುಡಿಯುವ ವರ್ಗದಲ್ಲಿ ಪುರುಷ ಪ್ರಧಾನತೆ ನಶಿಸಿಹೋಗಿದೆ. ಒಂದು ಪಕ್ಷ ಅದರ ಎಳೆಗಳು ಏನಾದರೂ ಉಳಿದಿದ್ದರೆ, ಅದು ಭೂತಕಾಲದ ಅಮಲು ಮಾತ್ರ. ಕ್ರಾಂತಿಯಾದ ನಂತರ ಇದೂ ಸಂಪೂರ್ಣವಾಗಿ ನಾಶವಾಗುತ್ತದೆ. ಏಂಗೆಲ್ಸ್‌ನ ಪ್ರಕಾರ ದುಡಿಯುವ ವರ್ಗದ ಹೆಂಗಸರು ತಮ್ಮ ಪುರುಷರೊಂದಿಗೆ 'ಖಾಸಗಿ ಆಸ್ತಿ'ಯನ್ನು ತೊಡೆದು ಹಾಕಲು ಶ್ರಮಿಸಬೇಕಾಗಿದೆ.

ಏಂಗೆಲ್ಸ್ ಹಾಗೂ ಇತರ ಮಾರ್ಕ್ಸ್‌ವಾದಿಗಳು ಸ್ತ್ರೀಯರ ಪರಾಧೀನತೆಯನ್ನು ಆರ್ಥಿಕ ದೃಷ್ಟಿಯಲ್ಲಿ ಮಾತ್ರವಿವರಿಸಿದ್ದಾರೆ. ಖಾಸಗಿ ಆಸ್ತಿಯನ್ನುರದ್ದುಪಡಿಸುವುರೊಂದಿಗೆ ಮಹಿಳೆಯರು ಶ್ರಮಿಕರೊಂದಿಗೆ ಬೆರೆಯುದತ್ತಾರೆ. ಪಿತೃಪ್ರಧಾನತೆ ತನಗೆ ತಾನೇ ಮಾಯವಾಗುತ್ತದೆ. ಮಹಿಳೆಯರು ಸ್ವತಂತ್ರರಾಗಬೇಕಾದರೆ ತಾವು ತಮ್ಮ ಪುರುಷರರೊಂದಿಗೆ ವರ್ಗ ಸಂಘರ್ಷದಲ್ಲಿ ತೊಡಗಬೇಕಾಗುತ್ತದೆ.

ಇತರ ಪುರುಷರು ಹಾಗೂ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಏಂಗೆಲ್ಸ್‌ನ ಸಿದ್ಧಾಂತವನ್ನು ಇನ್ನು ವಿಸ್ತೃತವಾಗಿ ಬೆಳೆಸಿದ್ದಾರೆ.

ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಮೂಲಭೂತವಾಗಿ ವರ್ಗ ವೈರುಧ್ಯಗಳನ್ನು ಒಪ್ಪಿಕೊಂಡು ಮಾರ್ಕ್ಸ್‌ವಾದದ ಚೌಕಟ್ಟಿನೊಳಗಡೆಯೇ ತಮ್ಮ ವಾದವನ್ನು ಬೆಳೆಸಿದ್ದಾರೆ. ಹಲವಾರು ಸ್ತ್ರೀವಾದಿಗಳು ಏಂಗೆಲ್ಸ್‌ನ ವಿವರಣೆಯನ್ನು ಟೀಕಿಸಿದ್ದಾರೆ. ಮಾನವ ಶಾಸ್ತ್ರದ ಬಗ್ಗೆ ಬಂದಿರುವ ಹೊಸ ಅಧ್ಯಯನಗಳು "ಕೃಷಿ ಬೆಳವಣಿಗೆ, ಆಹಾರ ಉತ್ಪಾದನೆ ಮುಂತಾದವುಗಳಲ್ಲಿ ಮಹಿಳೆಯರ ಪಾತ್ರದ

ಪ್ರಾಮುಖ್ಯತೆಯನ್ನು ಎತ್ತಿ ತೋರಿಸುವುದರ 'ಜೊತೆಗೆ "ಪುರುಷನೇ ಭೇಟೆಗಾರನಾಗಿದ್ದನು" ಎನ್ನುವ ಏಂಗೆಲ್ಸ್‌ನ ಮಾದರಿಯನ್ನು ಪ್ರಶ್ನಿಸುತ್ತವೆ.

ಏಂಗೆಲ್ಸ್ ಆರ್ಥಿಕ ಅಂಶಗಳ ಮೇಲೆ ನೀಡಿರುವ ಒತ್ತು ಸ್ತ್ರೀಯರ ಪರಾಧೀನತ್ವೆಯನ್ನು ವಿವರಿಸುವಲ್ಲಿ ಅಪೂರ್ಣವಾಗಿದೆಯೆಂದು ಸ್ತ್ರೀವಾದಿಗಳು ಭಾವಿಸುತ್ತಾರೆ. ದುಡಿಯುವ ವರ್ಗದ ಕುಟುಂಬಗಳಲ್ಲಿ ಮಹಿಳೆಯರ ಶೋಷಣೆಗೆ ಆಧಾರಗಳಿಲ್ಲ ಎಂಬುದನ್ನು ಅವರು ಒಪ್ಪುವುದಿಲ್ಲ. ಆದರೂ ಪಿತೃ ಪ್ರಾಧಾನ್ಯತೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಏಂಗೆಲ್ಸ್‌ನ ಕೊಡುಗೆ ಮಹತ್ವವಾದುದೆಂದು ಗಾರ್ಡಲರ್ನರ್ ಭಾವಿಸುತ್ತಾಳೆ. ಆಕೆ ಹೀಗೆ ಬರೆಯುತ್ತಾಳೆ.

"ನಮ್ಮ ಸಮಾಜ ಹಾಗೂ ಇತಿಹಾಸದಲ್ಲಿ ಸ್ತ್ರೀಯರ ಸ್ಥಾನಮಾನವನ್ನು ಅರ್ಥಮಾಡಿಕೊಳ್ಳುವಲ್ಲಿ ಏಂಗೆಲ್ಸ್‌ನ ಕೊಡುಗೆ ಮಹತ್ವಪೂರ್ಣವಾದುದು. 1. ರಕ್ತಸಂಬಂಧಗಳಲ್ಲಿ ಉಂಟಾದ ಮೂಲಭೂತವಾದ ಬದಲಾವಣೆ, ಹಾಗೂ ಶ್ರಮ ವಿಭಜನೆಯಲ್ಲಿ ಉಂಟಾದ ಬದಲಾವಣೆ ಒಂದು ಕಡೆಯಾದರೆ, ಇನ್ನೊಂದು ಕಡೆ ಸಮಾಜದಲ್ಲಿ ಸ್ತ್ರೀಯರ ಪಾತ್ರದ ನಡುವಿರುವ ಸಂಬಂಧವನ್ನೂ ಗುರುತಿಸುತ್ತಾನೆ. 2. ಖಾಸಗಿ ಆಸ್ತಿಯ ಪರಿಕಲ್ಪನೆಯ ಉಗಮ, ಏಕಪತ್ನಿತ್ವ ವಿವಾಹ ಹಾಗೂ ವೇಶ್ಯಾವೃತ್ತಿಯ ನಡುವಿರುವ ಸಂಬಂಧವನ್ನು ಎತ್ತಿ ತೋರಿಸಿದನು. 3. ಪುರುಷರ ಆರ್ಥಿಕ ಹಾಗೂ ರಾಜಕೀಯ ನಿಯಂತ್ರಣದ ನಡುವಿರುವ ಸಂಬಂಧವನ್ನು ಗುರುತಿಸಿದನು. 4. ಆಸ್ತಿವಂತ ಶ್ರೀಮಂತರ ಪ್ರಭಾವದಿಂದ ತುಂಬಿದ್ದ ಅರಾಜಕತೆಯ ಪ್ರಭುತ್ವದ ರಚನೆಯ ಕಾಲದಲ್ಲಿ ಸ್ತ್ರೀಯರ ಜಾಗತಿಕ ಐತಿಹಾಸಿಕ ಸೋಲಿಗೆ ಒಂದು ಚಾರಿತ್ರಿಕ ನೋಟವನ್ನು ನೀಡಿದ್ದು. ಈ ಮೇಲಿನ ತತ್ವಗಳನ್ನು ರುಜುವಾತುಮಾಡಲು ಸಾಧ್ಯವಾಗಧಿದ್ದರೂ ಏಂಗೆಲ್ಸ್ ಮುಂದಿನ ಶತಮಾನಕ್ಕಾಗಿ ಪ್ರಮುಖ ತಾತ್ವಿಕ ಸಿದ್ಧಾಂತಗಳನ್ನು ವ್ಯಾಖ್ಯಾನಿಸಿದ.

●

---

## ಬೆಂಕಿಗೊಂದು ಜವಾಬು

ಇವರೆಲ್ಲ ಕೇಳುವುದುಂಟು ಆಗಾಗ್ಗೆ
ಯಾಕೆ ಹೀಗೆ
ನಿನ್ನ ಕೈಯೆಲ್ಲ ತಣ್ಣಗೆ
ಮಂಜುಗಡ್ಡೆಯಂತೆ
ವಸಂತದಲ್ಲು ಶಿಶಿರವ ನೆನಪಿಸುವಂತೆ
ಶೀತರಕ್ತದ ಪ್ರಾಣಿಯಂತೆ ?
ನನ್ನೆದೆಯು ಬೆಂಕಿ
ತಣ್ಣಗೆ—
ಗೊತ್ತಿಲ್ಲ ಇವರಿಗೆ
ನನ್ನೆದೆಯ ಜ್ವಾಲೆಗಳಿಗೆ
ಸುಡುವ ಮನಸ್ಸಿಲ್ಲ
ಹೀಗೇ ಮಂಜಾಗಿ ಕೊರೆಕೊರೆದು
ಇವರ ನರಗಳನ್ನು ನೆತ್ತರನ್ನು
ಆಲಿಕಲ್ಲುಗಳ ಕೆಂಡಗಳಲ್ಲೆ
ಮರಗಟ್ಟಿಸುವಾಸೆ
ಶತಮಾನಗಳವರೆಗೆ ಹಾಗೆ
ನೆನಪಾಗಿ ಉಳಿಯಬೇಕು
ತೊಳೆಯದಂತೆ:
ಸುಟ್ಟು ಬರಿಬೂದಿಯಾಗಿ
ಗಾಳಿಯಲ್ಲಿ ಚದುರಿ ಹೋಗಬಾರದಲ್ಲ.
ಯಾಕೆ ಗೊತ್ತೆ ?
ಉರಿಯುವುದಿಲ್ಲ ನೀನು
ಎನ್ನುವ ಇವರೇ
ಉರಿಯಹತ್ತಿದರೆ ನಾನು
ತಕ್ಷಣವೇ ಓಡಿಬಂದು ನೀರೆರಚಿ ನಂದಿಸುತ್ತಾರೆ.
ಆದರೆ ಹೀಗೆ
ಅರ್ಥವಾಗದಂತೆ ತಣ್ಣಗೆ ಕೊರೆದರೆ
ತಬ್ಬಿಬ್ಬಾಗುತ್ತಾರೆ.
ಅವರ ತಬ್ಬಿಬ್ಬಿನ ಕಿಡಿಗಳಲ್ಲಿ
ನನ್ನೊಳಗಿನ ಮಂಜು ಕರಕರಗಿ
ಹನಿಹನಿಯಾಗಿ ಇಳಿದು
ಅವರ ಬೆಂಕಿಯನ್ನೆ ಒಂದು ದಿನ
ಕರಗಿಸಿಬಿಟ್ಟೀತು.

○ ಚಿತ್‌ಪ್ರಭಾ

# ಓದುಗರ ವಿಭಾಗ

ಬಹಳ ಸಮಯದಿಂದ ನಾವು ನಿರೀಕ್ಷಿಸುತ್ತಿದ್ದ ಪತ್ರಿಕೆಯೊಂದು 'ಮಾನಸ' ಎಂಬ ಹೆಸರಿನಲ್ಲಿ ಬರುತ್ತಿರುವುದು ಸಂತಸ ತಂದಿದೆ.

—ಹಿಮಕರ ಎ. ಕೆ.
ಗುತ್ತಿಗಾರು

ಓದುಗರ ವಿಭಾಗವನ್ನು ಮತ್ತೆ ಪ್ರಾರಂಭಿಸಿರುವುದಕ್ಕೆ ಧನ್ಯವಾದಗಳು.

—ಡಾ॥ ಎಸ್. ಎಸ್. ಉಷಾರಾಣಿ
ಮೈಸೂರು

ಪತ್ರಿಕೆ ನಡೆಸುವುದರ ಹಿಂದೆ ಇರುವ ಪರಿಶ್ರಮ ಹೆಚ್ಚಿನದು, ಪತ್ರಿಕೆಯ ಜೊತೆಯೇ ನಮ್ಮಂತವರೂ ಕೂಡ ಬೆಳೆದಿದ್ದೇವೆ ಎಂದು ಹೇಳಿಕೊಳ್ಳಲು ಯಾವುದೇ ಸಂಕೋಚ ಪಡುವ ಅಗತ್ಯವಿಲ್ಲ.

—ಸಿ. ಜಿ. ಉಷಾದೇವಿ
ಮೈಸೂರು

ಮಾನಸ ಸ್ತ್ರೀಯ ಅಭಿವ್ಯಕ್ತಿಗೊಂದು ಅವಕಾಶ ಒದಗಿಸಲಿ. ಹೋರಾಟ ಮನೋಭಾವನೆ ರೂಪಿಸುವ ಮಾನಸದಲ್ಲಿ ಸಾಹಿತ್ಯ ಸುಗಂಧವೂ ಬೆರೆತರೆ ಇನ್ನು ಹೆಚ್ಚು ಪ್ರಸಾರ ಪಡೆಯಬಹುದೆಂದು ನನ್ನ ಅನಿಸಿಕೆ.

—ಲಕ್ಷ್ಮೀನರಸಮ್ಮ ಎಂ. ಎಸ್.
ಬೆಂಗಳೂರು

ಇತ್ತೀಚೆಗೆ ಮಾನಸ ಚನ್ನಾಗಿ ಮೂಡಿಬರುತ್ತಿದೆ. 'ಗಿರಿಜಾ' ಕಿರುಚಿತ್ರವನ್ನು ಪರಿಚಯಿಸಿದ್ದು ತುಂಬಾ ಸಂತೋಷ. ಇಂಥ ಪರಿಣಾಮಕಾರಿ ಸಾಹಿತ್ಯ ಕೃತಿಗಳನ್ನೂ ಪರಿಚಯಿಸಿದರೆ ಒಳ್ಳೆಯದು.

—ಗೀತಾ ಡಿ. ಸಿ.
ದೊಡ್ಡಹೆಜ್ಜಾಜಿ

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067